# ಕೊಡಗು  ಸಂಗಾತಿ

ರ್ 1 ರಿಂದ 15, 1999 ಪಾಕ್ಷಿಕ ಪತ್ರಿಕೆ (ಸೋಣ ತಿಂಗ 15 – ಸೋಣ 29ರತನಕ)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ನಕಿ : ಪಟ್ಟಡ ಶೀಲಾಮಣಿ ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

N. N. 240 ಸಂಪುಟ : 3 ಸಂಚಿಕೆ : 17 ಪುಟಗಳು : 24 ಬೆಲೆ ರೂ. : 5-00








ದಿನಾಂಕ 11-8-1999ರಲ್ಲಿ ಶತಮಾನದ ಅಂತ್ಯದ ಮನಮೋಹಕ ಖಗ್ರಾಸ ಸೂರ್ಯ ಗ್ರಹಣ, ನೋಡುಗರ ಖುಷಿಗೆ ಮೇಘದೂತನ ತಡೆ

**ಕೊಡಗಿನ ಜನತೆಗೆ ಮತ್ತು ಸಂಗಾತಿ ಓದುಗರಿಗೆಲ್ಲರಿಗೂ ಗಣೇಶ ಚತುರ್ಥಿ**

**ಹಾಗೂ ಕೈಲ್ ಮುಹೂರ್ತ ಹಬ್ಬದ ಶುಭಾಶಯಗಳು**

# ಅಭಿನಂದನೆ



ಶ್ರೀ ಬಡ್ಡನ ಸೋಮಣ್ಣ ರಾಮಚಂದ್ರ
ಮಲ್ಲಿಕ , ಸುಹಾಸ್

ಇವರು ಕುಯ್ಯಂಗೇರಿ ಗ್ರಾಮದ ಬಡ್ಡನ ಸೋಮಣ್ಣನವರ ಪುತ್ರರು. ಪ್ರಸ್ತುತ ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್ ಕಂಪೆನಿಯಲ್ಲಿ ಅಸಿಸ್ಟೆಂಟ್ ಪ್ರೊಡಕ್ಷನ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಇವರು ಇತ್ತೀಚೆಗೆ ಕಂಪ್ಯೂಟರ್ ಯು.ಪಿ.ಎಸ್.(UPS) ಬಗ್ಗೆ ಹೆಚ್ಚಿನ ಮಾಹಿತಿ ಪಡೆಯುವುದರ ಮೇರೆಗೆ ತೈವಾನ್, ಚೀನಾ (ಸಾನ್‌ಜೆನ್) ಹಾಗೂ ಹಾಂಕಾಂಗ್ ದೇಶಗಳಿಗೆ ಭೇಟಿಯಿತ್ತು ಇದೇ ಆಗಸ್ಟ್ 14ರಂದು ಸಿಂಗಪೂರ್ ಮಾರ್ಗವಾಗಿ ಹಿಂತಿರುಗಿರುತ್ತಾರೆ. ಇವರಿಗೆ ಕುಲದೇವರಾದ ಶ್ರೀ ವೆಂಕಟರಮಣ ಸ್ವಾಮಿಯ ದಯೆ ಕೃಪ ಕಟಾಕ್ಷ ಸದಾ ಇರಲೆಂದು ಹಾರೈಸುವೆವು

ಪತ್ನಿ/ಪುತ್ರ : ಮಲ್ಲಿಕ, ಸುಹಾಸ್ ತುಮಕೂರು
ತಂದೆ / ತಾಯಿ : ಬಡ್ಡನ ಸೋಮಣ್ಣ, ಪೂವಮ್ಮ ಕುಯ್ಯಂಗೇರಿ
ಮಾವ/ಅತ್ತೆ : ಕುಲ್ಲಚ್ಚನ ಕಾರ್ಯಪ್ಪ, ಜ್ಯೋತಿ ಕುಂಬಳದಾಳು
ತಮ್ಮ/ನಾದುನಿ : ಬಡ್ಡನ ಚಂಗಪ್ಪ, ಚಂದ್ರಕಲ ಬೆಂಗಳೂರು

---

## ರಾಜಕೀಯದಲ್ಲಿ ಚಿಗುರಿದ ಶ್ರೀ ಕಾಚೆಲಂಡ ಅಶೋಕ್



ಶ್ರೀ ಕಾಚೆಲಂಡ ಅಶೋಕ್

ಮೂಲತಃ ಕೊಡಗಿನವರಾದ ಶ್ರೀ ಕಾಚೆಲಂಡ ಅಶೋಕ್‌ನವು ಲೋಕಶಕ್ತಿಯ ಯುವ ಘಟಕ, ಬೆಂಗಳೂರು ಉತ್ತರಹಳ್ಳಿ ಕ್ಷೇತ್ರದ ಅಧ್ಯಕ್ಷರಾಗಿ ಆಯ್ಕೆ ಆಗೋಲೊ. ಇವುಕ್ಕ ನಮ್ಮ ಶುಭಾಶಯಗ.

ಇಂದ : ಕಲ್ಲುಮುಟ್ಲು ಬಸಪ್ಪ
ಕಟ್ರತನ ರಾಜೇಶ್, ಬೆಂಗಳೂರು.

---

## ಕಾವೇರಿನಾಡು, ಬೆಂಗಳೂರು ಇವರ ವಿಶೇಷ ಪ್ರಕಟಣೆ

ಕಾವೇರಿನಾಡು, ಬೆಂಗಳೂರು ಇದು ನಾಲ್ಕನೆ ವರ್ಷ ಕೈಲ್‌ಪೊಳ್ದ್ ಹಬ್ಬ ಆಚರಿಸುತ್ತಿರುವುದು ಸಂತೋಷಕರ ಸಂಗತಿ. ಕಾವೇರಿ ನಾಡಿನಲ್ಲಿ ನಿವೇಶನಕ್ಕಾಗಿ ಅರ್ಜಿ ಸಲ್ಲಿಸಿದವರಿಗೊಂದು ಸುವಾರ್ತೆ. ನಿವೇಶನದ ಅಲಿನೇಷನ್ನ್ ಕೆಲಸಗಳು ಈಗಾಗಲೇ ಮುಗಿದಿದ್ದು, ರಿಜಿಸ್ಟ್ರೇಷನ್ ಕೆಲಸ ಪ್ರಾರಂಭವಾಗಿದೆ. ನಿವೇಶನದಾರರು ಆದಷ್ಟು ಬೇಗ ತಮ್ಮ ನಿವೇಶನವನ್ನು ರಿಜಿಸ್ಟ್ರೇಷನ್ ಮಾಡ್ಸಿಕೊಳ್ಳುವಂತೆ ವಿನಂತಿ. ಕಾವೇರಿನಾಡಿನ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ಕಾವೇರಿತಾಯಿಯ ಗೋಪುರವು ನಿರ್ಮಾಣವಾಗಿದೆ. ಮೂಲ ತಲಕಾವೇರಿಯೇ ಕೈ ಬೀಸಿ ಕರೆಯುವಂತಿದೆ ಗೌಡ ಜನಾಂಗದ ಬಾಂಧವರನ್ನು ಈ ನಾಡಿಗೆ. ಕಾವೇರಿ ನಾಡಿನಲ್ಲಿ ಕಲಾಭಿಮಾನಿಗಳಿಗಾಗಿ ಸುಂದರವಾದ ರಂಗಮಂದಿರ ತಲೆ ಎತ್ತಿ ನಿಂತಿದೆ. ದಿನಾಂಕ 12-9-1999ರಂದು ಕುಣಿದು, ಕುಪ್ಪಳಿಸಿ ತಮ್ಮ ಕಲಾ ಪ್ರತಿಭೆಯನ್ನು ಮೆರೆಯಲು ಸರ್ವಗೌಡ ಬಾಂಧವರಿಗೊಂದು ಸುವರ್ಣವಕಾಶ. ಕರೆ ನಮ್ಮದು, ತೃಪ್ತಿ ನಿಮ್ಮದು ಬನ್ನಿ ತಮ್ಮ ಆಗಮನಾಭಿಲಾಷೆಗಳೊಂದಿಗೆ ಮರೆಯದಿರಿ. ಜನಾಂಗದ ಐಕ್ಯತೆಯ ಸಹಬಾಳ್ವೆಯೇ ನಮ್ಮ ಗುರಿ.

ಶ್ರೀ ಅಮ್ಮಾಜೀರ ಪೊನ್ನಪ್ಪ
ಸಂಸ್ಥಾಪಕ, ಕಾವೇರಿನಾಡು ಮತ್ತು ಆಡಳಿತ ವರ್ಗ, ಬೆಂಗಳೂರು

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಯಲಕ್ಷ್ಮಿಪುರಂ, ಮೈಸೂರು - 570 012.
**ಫೋನ್ : 0821/516771**

**ಮಡಿಕೇರಿಯಲ್ಲಿ ಸಂಗಾತಿ ಕಛೇರಿ**

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 21-16 ಎಲ್. ಐ. ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಸಂಪರ್ಕಿಸುವ ವಿಳಾಸ**

**ಮಣಿ ನಂಗಾರ್**
ಹೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ - 571 201
ದೂರವಾಣಿ : 08272/29372

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೆಜ್
ಮುಖ್ಯ ರಸ್ತೆ, ಕುಶಾಲನಗರ - 571 234
ದೂರವಾಣಿ : 08276/73370 (R.)

**ಅಮ್ಮಾಜೀರ ಪೊನ್ನಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು - 04
ದೂರವಾಣಿ - 080/6342822

**ಕಲ್ಲುಮುಟ್ಲು ಬಸಪ್ಪ C/o ನಾರಾಯಣ**
ನಂ. 233/9, 2ನೇ ಕ್ರಾಸ್, ನಂಜಪ್ಪ ಬ್ಲಾಕ್,
ಕೆಂಪೇಗೌಡ ನಗರ, ಬೆಂಗಳೂರು - 19
ದೂರವಾಣಿ - 080/6549669





★ ಸಂಪಾದಕೀಯ : ಗೌಡರ ಮದುವೆಗಳಲ್ಲಿ ಅಕ್ಕಿ ಮುಹೂರ್ತ 02
★ ಕವನಗಳು : ಆಟಿ ತಿಂಗಳ ಓಡಾಟ, ನ್ಯಾಯಾಲಯ 02
★ ಆರೋಗ್ಯ ಚಿಂತನೆ : ಕೆಮ್ಮು 03
★ ನಮ್ಮ ಜನಾಂಗವು ವೀರರು ಹೌದು ಧೀರರು ಹೌದು ಅನ್ನುವುದಕ್ಕೆ ಸಾಕ್ಷಿಯಾಗಿ ಇವರ ಸಾಹಸ ಶೌರ್ಯಕ್ಕೆ ಸಿಕ್ಕಿದ ಶೌರ್ಯ ಪ್ರಶಸ್ತಿ 04
★ ಕೊಡಗಿನ ಅರೆಭಾಷೆ ಗೌಡರು 05
★ ಅಂಕಗಳ ಮಹತ್ವ, ಚುಟುಕಗಳು 07
★ ಪತ್ರ ವಿಭಾಗ : ಶುಭಹಾರೈಕೆ 08
★ ಬದುಕು (ಜೀವನ), ನಿಮ್ಮಲ್ಲಿ ನಾಯಕತ್ವದ ಗುಣಗಳಿವೆಯೇ? 08
★ ವಲಸೆ : ಯಾರು? ಎಲ್ಲಿಂದ?, ನಗೆಹನಿ 09
★ ಅಪೂರ್ವವಾದ ಸಾರ್ಥಕ ಸಂಶೋಧನೆ 10
★ ಹತ್ತು ಕುಟುಂಬ ಹದಿನೆಂಟು ಗೋತ್ರಕ್ಕೆ ಸೇರಿದ ಅರೆಭಾಷೆ ಬಾಂಧವರು ತಮ್ಮ ಮನೆಯ ಗೋತ್ರವನ್ನು ಸಂಗಾತಿಗೆ ತಿಳಿಸುವಂತೆ ವಿಶೇಷ ವಿನಂತಿ 11
★ ಸರ್ಪಗಂಧ - ಧಾರವಾಹಿ - 13 13
★ ಬಾಂಧವರಲ್ಲಿ ವಿನಂತಿ 18


**ಅರೆಭಾಷಿಕ ವಿಭಾಗ**


★ ನನ್ನ ರಾಣಿ 15
★ ನಾನು ಯುದ್ಧಕ್ಕೆ ಹೋದ್ 16
★ "ಹುತಾತ್ಮ ಗುಡ್ಡೆಮನೆ ಅಪ್ಪಯ್ಯಗೌಡ" ಪ್ರಬಂಧ ಸ್ಪರ್ಧೆ 17
★ ಕರಿಚಿನ್ನ - ಧಾರವಾಹಿ - 31 19


## ಚಂದಾ ವಿವರ

| | | |
|---|---|---|
| ಜೀವಾವಧಿ ಸದಸ್ಯತನ | - | 2000 ರೂ. |
| ವಾರ್ಷಿಕ ಚಂದಾ | - | 120 ರೂ. |
| ಅರ್ಧ ವಾರ್ಷಿಕ | - | 60 ರೂ. |
| ಬಿಡಿ ಪ್ರತಿ | - | 5 ರೂ. |

# ಸಂಪಾದಕೀಯ :

## ಗೌಡರ ಮದುವೆಗಳಲ್ಲಿ ಅಕ್ಕಿ ಮುಹೂರ್ತ

ಕೊಡಗಿನ ಗೌಡರ ಮದುವೆಗಳಲ್ಲಿ ಅಕ್ಕಿಮುಹೂರ್ತ ಮತ್ತು ಧಾರಾ ಮುಹೂರ್ತಗಳೆಂದು ವಿಂಗಡಿಸಿದ್ದಾರೆ. ಮದುವೆ ಶಾಸ್ತ್ರದಲ್ಲಿ ಅಕ್ಕಿಯ ಶಾಸ್ತ್ರ ವಿವಿಧ ರೀತಿಯಲ್ಲಿ ನಡೆಯುತ್ತದೆ. ಮದುವೆಯ ಚಪ್ಪರ (ಊರು ಕೂಡುವುದು) ದಿನ ಕೈಕೊಳ್ಳುವ ಶಾಸ್ತ್ರಗಳಿಗೆ ಕುಲದೇವರು ವೆಂಕಟರಮಣನನ್ನು ನೆನೆಯುವಾಗ ವಧು ಯಾ ವರ ಪಡಶಾಲೆ (ಬಾಡೆ) ಯಲ್ಲಿ ಇಟ್ಟಿರುವ ದೀವಿಗೆಗೆ ಅಕ್ಕಿ ಹಾಕಿ ಹಿರಿಯರ ಕಾಲು ಮುಟ್ಟಿ ನಮಸ್ಕರಿಸಿ ಸೋದರಮಾವ ಕಾಸ್ ತಾಳಿ ಕಟ್ಟುತ್ತಾರೆ. ಮದುಮಕ್ಕಳಿಗೆ ಅರಶಿನ ಶಾಸ್ತ್ರಕ್ಕೆ ಕೂರಿಸುವಾಗಲೂ ಅಕ್ಕಿಯಿಂದ ಮೂರು ಮೂರು ಸಲ ಆಶೀರ್ವಾದ ಮಾಡುತ್ತಾರೆ. ಅದೇ ರೀತಿ ಮನೆಯ ಧಾರಾ ಮಂಟಪದಲ್ಲಿಯೂ ವಧು ಯಾ ವರನನ್ನು ಕೂಡಿಸಿ ಅರಶಿನ ಶಾಸ್ತ್ರ ಮೊಡುವಾಗಲೂ ಮುತ್ತೈದೆಯರು ಅಕ್ಕಿಯನ್ನು ಹಾಕಿ ಶಾಸ್ತ್ರ ಮಾಡುತ್ತಾರೆ. ಮಾರನೆಯ ದಿನ ಬೆಳಿಗ್ಗೆ ಮದರಂಗಿ ಶಾಸ್ತ್ರದಲ್ಲೂ ಮದುವೆ ಮಂಟಪದಡಿಯಲ್ಲಿ ದೀವಿಗೆ ಉರಿಸಿ ದೀವಿಗೆಗೆ ಅಕ್ಕಿ ಹಾಕಿ ಶಾಸ್ತ್ರವನ್ನು ಮಾಡುತ್ತಾರೆ. ಈ ಎಲ್ಲಾ ಕಾರ್ಯಗಳಿಗೆ ದೀವಳಿಗೆಗೆ ಅಕ್ಕಿ ಹಾಕುವುದೆಂದರೆ ದೀವಳಿಗೆಯನ್ನು ದೇವಸ್ವರೂಪವೆಂದು ತಿಳಿದು ಅಕ್ಕಿ ಹಾಕಿ ನೆನೆದು ಕಾರ್ಯ ಮಾಡಿದರೆ ಗುರು ಹಿರಿಯರ ಆಶೀರ್ವಾದ ನವ ವಧೂ ಯಾ ವರನಿಗೆ ಕರುಣಿಸಲೆಂಬ ಅಭಿಪ್ರಾಯ.

ಅದೇ ರೀತಿ ಮದುವೆಗೆಂದು ಸೇರಿದ ಬಂಧುಬಳಗದವರು ತಮ್ಮ ಆಶೀರ್ವಾದವನ್ನು ದೇವರನ್ನು ನೆನೆದು (ದೀವಳಿಗೆಗೆ ಅಕ್ಕಿ ಹಾಕಿ) ವರ ಯಾ ವಧುವಿಗೆ ಮೂರು ಮೂರು ಸಲ ಅಕ್ಕಿಯಿಂದ ಮೈ ಮುಟ್ಟಿ ತಲೆಗೆ ಅಕ್ಕಿಯನ್ನು ಎರಚುವ ಮೂಲಕ ತನ್ನ ಆಶೀರ್ವಾದವನ್ನು ವಧೂ ಯಾ ವರನಿಗೆ ನೀಡುವಾಗ ವಧು ಯಾ ವರ ಅವರ ಆಶೀರ್ವಾದ ಬೇಡಲು ಹಿರಿಯರ ಕಾಲು ಮುಟ್ಟಿ ನಮಸ್ಕರಿಸಿದಾಗ ಆ ಹಿರಿಯ ಅವನ ಶಕ್ತಿಯನುಸಾರ ವಧು ವರನಿಗೆ ತನ್ನ ಪ್ರಿ
ಕಾಣಿಕೆಯನ್ನು ಕೊಡುತ್ತಾರೆ. ಈ ರೀತಿ ಅಲ್ಲಿ ನೆರೆದವರೆಲ್ಲಾ
ವರರನ್ನು ಉಪಚರಿಸುವುದಕ್ಕೆ ಅಕ್ಕಿ ಮುಹೂರ್ತವೆಂದು ಕರೆಯು

ಈ ಅಕ್ಕಿ ಮುಹೂರ್ತದ ನಂತರ ವರ ವಧುವಿನ ಪ
ಊಟ ಕೊಡುತ್ತಾರೆ. ಮದುವೆಗೆ ಜನರನ್ನು ಆಹ್ವಾನಿಸುವುದು
ಸೇರಿದ ಹಿರಿಯರು ವಧು ವರನಿಗೆ ಆಶೀರ್ವದಿಸಿ ಊಟ
ಹೋಗಲೆಂಬ ಅಭಿಪ್ರಾಯದಿಂದ ಆದರೆ ಈಗ ಈ ಪದ್ಧತಿ ತಲ
ಆಗಿ ಹೋಗಿದೆ. ಅಕ್ಕಿ ಮುಹೂರ್ತವೇ ಮರೆತಿದ್ದಾರೆ.
ಮುಹೂರ್ತದ ನಂತರ ದಂಪತಿಗಳು ಮದುವೆಯ ಉಡುಪನ್ನು
ನವನವೀನ ಸೂಟು ಟೈ ಬೂಟನ್ನು ಧರಿಸಿ ಅಲಂಕೃತವಾದ ಆಸ
ಕುಳ್ಳಿರಿಸಿ ವಧುವರರಿಗೆ ಬಹುಮಾನಗಳನ್ನು ಕೊಟ್ಟ ನಂತರ ಫೊ
ಮತ್ತು ವೀಡಿಯೋಗಳಿಗೆ ಭಾವಭಂಗಿಯಲ್ಲಿ ಪ್ರದರ್ಶಿಸಿ ಊಟ
ಹೋಗುತ್ತಾರೆ. ಆರತಕ್ಷತೆ ಮಾಡುವ ಮಂಟಪದಲ್ಲಿ ಕೆಲ
ಅಕ್ಕಿ ಇಟ್ಟಿರುತ್ತಾರೆ. ಇನ್ನು ಕೆಲವು ಕಡೆಗಳಲ್ಲಿ ಅಕ್ಕಿಯೂ ಇ
ದೀವಿಗೆಯನ್ನು ಒಂದು ಮೂಲೆಯಲ್ಲಿ ಇಟ್ಟಿರುತ್ತಾರೆ ಅದಕ್ಕೆ ಯ
ಅಕ್ಕಿ ಹಾಕುವುದಿಲ್ಲ ಕಾರಣವೇನೆಂದರೆ ವಧೂ ವರರೂ ಕ
ಆರತಕ್ಷತೆ ಮಾಡುವವರೂ ಸಹ ಪಾದರಕ್ಷೆಯನ್ನು ಹಾಕಿಕೆ
ಇರುವುದರಿಂದ ದೀವಿಗೆಗೆ ಅಕ್ಕಿ ಹಾಕುವ ಗೋಜಿಗೆ ಹೋಗುವ
ಮದುವೆ ಎಂಬ ಪುಣ್ಯ ಕೆಲಸದಲ್ಲಿ ಪ್ರತಿ ಹಂತಕ್ಕು ದೀವಿಗೆ
ಹಾಕಿ ಪೂಜಿಸಿ ಆಶೀರ್ವಾದ ಮಾಡುವ ಬದಲು ವಧು
ಧನವಂತಿಕೆಯನ್ನು ಮೆರೆಸುವ ವೈಭವದ ಹಿನ್ನೆಲೆಯಲ್ಲಿ ಕ
ಮಂಟಪವೆಂಬ ದೇವಸ್ಥಾನಕ್ಕೆ ಸಮಾನವಾದ ಪವಿತ್ರ
ಪವಿತ್ರತೆಯನ್ನೆ ಕೆಡಿಸಿದಂತಾಗುವುದಿಲ್ಲವೆ? ಎಂದು ಸಂಗಾತಿಯ
ಈ ಪ್ರಶ್ನೆಯನ್ನು ಜನತೆಯೇ, ಜನತೆಗೋಸ್ಕರ, ಜನರಿಗಾಗಿ ಯೆ
ತೀರ್ಮಾನಿಸಬೇಕಾದದು ಮೊದಲ ಕರ್ತವ್ಯವಾಗಿದೆ.

### ಆಟಿ ತಿಂಗಳ ಓಡಾಟ

ಅಜ್ಜಾ ಅಜ್ಜಿಕ , ಅಪ್ಪನು ಅವ್ವಾ
ಅಣ್ಣಾ ತಮ್ಮ, ಅಕ್ಕಾತಂಗೆಕ
ಎಲ್ಲವುಕೀಗ ನಿಲ್ಲದ ಓಡಾಟ
ಆಟಿ ತಿಂಗಳಲಿ ಬರಿ ಬಂಡಾಟ
ಎಲ್ಲಾ ಕಡೆ ಹರಹರ ಹೀ ಹೀ
ಕೊಡ್ಯ ಕೆಂಪಂಗೆ, ಬೂದ ಮೋರಂಗೆ
ಎಲ್ಲವುಕೀಗ ಬೇಡದ ಸುಸ್ತಾಟ
ಆಟಿ ತಿಂಗಳಲಿ ಬರಿ ಗೋಳಾಟ
ಏಕ್‌ಲ್ ತುಂಬಾ ಸೀರೆ ಸಿಪಾಯಿಗ
ಅಬ್ಬಕ್ಕ ಓಬವ್ವ ಚೆನ್ನಮ್ಮ ಥರ
ಎಲ್ಲವುಕೀಗ ಭಾರೀ ಹೋರಾಟ
ಸೋಬಾನೆ ಸುವ್ವಿನ ಚೆಲ್ಲಾಟ
ಥಟ ಥಟ ಬರಬರಾಂತ
ಧಡ ಧಡ ಚಿರಿಚಿರಿಂತ
ಹಗಲು ರಾತ್ರಿನು ಮಳೆ ಕಾಟ
ಆಟಿ ತಿಂಗಳ ಕೋಟದ ದರ್ಪಟ
ರೊಟ್ಟೀ ಕಾಫಿ, ಕೋಳಿನು ಕಳ್ಳ್
ಒಂದೇ ಗಳಿಗೆಲಿ ಎಲ್ಲಾ ಖಾಲಿ
ಆಟಿ ತಿಂಗಳ ಗಾವುನ ಊಟ
ಗದ್ದೆ ಇಡೀ ಹೊಯ್ಯದ ಆರ್ಭಟ
ಅಜ್ಜಿ ಕಳಿಗೆಲ್ಲಾ ಪಣ್‌ಪುಳಿ ಬೇಟೆ
ಮಕ್ಕಳಿಗೆಲ್ಲಾ ಅಳಂಬು ಬೇಟೆ
ಆಟಿ ಪಾಯಸ, ಮರಕೆಸ ಪತ್ರಡೆ
ಮನೆ ಮನೆಲೆಲ್ಲಾ ಗಮ್ಮತ್ತು ಊಟ

**ಕುಲ್ಲಚನ ಕಾರ್ಯಪ್ಪ**
**ಕುಂಬಳದಾಳುಗ್ರಾಮ**

### ನ್ಯಾಯಾಲಯ

ನ್ಯಾಯ ಬೇಕು ನೋಡವನ ಬಾಳಿನಲ್ಲಿ
ನ್ಯಾಯಾ ಅನ್ಯಾಯಗಳ ಅಂತರದಿಂದ,
ನ್ಯಾಯಾಲಯವಿರುವುದು ಸಕಲ
ಸಮಾಜದ ಸ್ಪಟಿಕದಂತೆ
ನ್ಯಾಯ ಬೇಡಿ ಬಂದ ಜೀವಿಯ
ಕರುಣೆಯ ಜ್ಯೋತಿಯಂತೆ
ನ್ಯಾಯ ಬೇಕು ಒಂದರ ಮೇಲೊಂದರಂ
ಅದೇ ಸಮಾಜದ ದೀಪ್ತಿಯಂತೆ
ನ್ಯಾಯವೇ ದೇವತೆ ನ್ಯಾಯವೇ ಕರುಣಾವ
ನ್ಯಾಯಾಲಯವೇ ನ್ಯಾಯ ಅನ್ಯಾಯಗಳ
ಸಮಾಜದ ಅಂತರದ ಕೊಂಡಿಯ ದೇವಾ

**ರಚನೆ : ಮುದ್ಯೇನ ಎ. ಸು**
**ಮಡಿ**

# ಆರೋಗ್ಯ ಚಿಂತನೆ

## ು : (Cough)

**ಕೆಮ್ಮು ಅಂದರೆ ಏನು?**

ಅತ್ಯಂತ ಸಾಮಾನ್ಯ ತೊಂದರೆಯಾದ ಕೆಮ್ಮು ಒಂದು ಗವಲ್ಲ ಬದಲಾಗಿ ಜ್ವರ, ಎದೆನೋವು, ತಲೆನೋವು ಇತ್ಯಾದಿ ತೆ ಇದೂ ಒಂದು ರೋಗ ಲಕ್ಷಣ.

ನಾವು ಉಸಿರಾಡುವ ಗಾಳಿ ಮೂಗು, ಗಂಟಲು, ಶ್ವಾಸನಾಳ ರ್ಗದ ಮೂಲಕ ಶ್ವಾಸಕೋಶವನ್ನು ಸೇರುತ್ತದೆ. ಈ ಮಾರ್ಗದಲ್ಲಿ ವುದೇ ಅಡಚಣೆಯಿಲ್ಲದಂತೆ (Clear) ನೋಡಿಕೊಳ್ಳುವುದು ದ ಕೆಲಸ ಮೂಗಿನೊಳಕ್ಕೆ ಅನ್ಯವಸ್ತು ಇದ್ದಲ್ಲಿ 'ಸೀನು'ವುದರ ಲಕ ಅದನ್ನು ಹೊರಕ್ಕೆ ಹಾಕಲು ದೇಹ ಪ್ರಯತ್ನಿಸುತ್ತದೆ. ಲು, ಶ್ವಾಸಮಾರ್ಗದಲ್ಲಿ ಯಾವುದಾದರೂ ಅಡ್ಡಿ ಮಾಡುತ್ತಿರುವ ಇದ್ದಲ್ಲಿ ಕೆಮ್ಮಿನ ಮೂಲಕ ಹೊರಹಾಕಲು ದೇಹ ಪ್ರಯತ್ನಿಸುತ್ತದೆ. ತ ಸಣ್ಣ ವಸ್ತು ಧೂಳು, ಹೊಗೆ ಇತ್ಯಾದಿ ಕಿರಿತ ಉಂಟು ಪತ್ತಿದ್ದಲ್ಲಿ ಒಣಕೆಮ್ಮು (Dry Cough) ಕಾಣಿಸಿಕೊಳ್ಳುವುದು. ಂದ ಕೆಮ್ಮು ಎಂಬುದು ದೇಹದ ರಕ್ಷಣಾಕ್ರಮಗಳಲ್ಲಿ ಒಂದು ು ಎಂಬುದೇ ಇರುತ್ತಿಲ್ಲದಿದ್ದರೆ, ಶ್ವಾಸನಾಳದಲ್ಲಿ ಕಫ, ಕೀವು, ು ಇತ್ಯಾದಿ ಅನ್ಯವಸ್ತುಗಳು ಅಡ್ಡಿ ಮಾಡುತ್ತಿದ್ದರೂ ನಮ್ಮ ನಕ್ಕೆ ಬಾರದೆ ಅವು ಪೂರ್ತಿ ಅಡ್ಡಿಮಾಡಿ ಮರಣವೇ ವಿಸುತ್ತಿದ್ದಿರಬಹುದು ಅಲ್ಲವೆ?

**ಕೆಮ್ಮಿಗೆ ಕಾರಣಗಳೇನು?**

ನೆಗಡಿ, ಸೈನುಸೈಟಿಸ್, ಗಂಟಲು ನೋವಿನ ತರ ಸೋಂಕು ection) ಕೆಲವೊಮ್ಮೆ ಕೆಳಗಿರುವ ಶ್ವಾಸನಾಳಕ್ಕೂ ಹರಡಬಹುದು. ್ಯಾಕ್ಟೀರಿಯಾಗಳನ್ನು ಹೊರಹಾಕಲು ಶ್ವಾಸನಾಳಗಳ ಗ್ರಂಥಿಗಳು ಕೊಂಡು ತೀವ್ರ ಪ್ರಯತ್ನ ನಡೆಸುತ್ತದೆ. ದೇಹದ ಬಿಳಿಯ ಣಗಳೂ ರೋಗಾಣುಗಳೊಂದಿಗೆ ಹೋರಾಡುತ್ತವೆ. ಈ ಯಲ್ಲಿ ಹಳದಿ ಬಣ್ಣದ ಕಫ (ಉಳಿದ ಭಾಗದಲ್ಲಿ ಕೀವು ಾದಂತೆ) ಉತ್ಪತ್ತಿಯಾಗುತ್ತದೆ. ಮೇಲೆ ತಿಳಿಸಿದಂತೆ ಈ ಕಫ ಯ ಸಂಚಾರಕ್ಕೆ ಅಡ್ಡಿಯನ್ನುಂಟು ಮಾಡುತ್ತಿರುತ್ತದೆ. ಅವನ್ನು ರಹಾಕಲು ದೇಹ ಕೆಮ್ಮನ್ನು ಬಳಸಿಕೊಳ್ಳುತ್ತದೆ.

ಕೆಲವರಿಗೆ ವಾತಾವರಣದಲ್ಲಿರುವ ಕೆಲವಸ್ತುಗಳು ಒಗ್ಗದಿರ ುದು. ಉದಾ : ಧೂಳು, ಪಾರ್ಥೆನಿಯಂ ಇತ್ಯಾದಿ ಸಸ್ಯಗಳು, ಗಳ ಕೂದಲು ಇತ್ಯಾದಿ ಯಾವುದೇ ವಸ್ತು ವ್ಯಕ್ತಿಯ ದೇಹವನ್ನು ಗು, ಗಂಟಲಿನ ಮೂಲಕ ಶ್ವಾಸನಾಳವನ್ನು ಪ್ರವೇಶಿಸಿದಾಗ ಅವಕ್ಕೆ ರ್ಜಿಯಾಗಿ ಕೆಮ್ಮು ಕಾಣಿಸಿಕೊಳ್ಳಬುದು (ಅಲರ್ಜಿಯ ಕೆಮ್ಮು) ಕದಲ್ಲಿ ಹುಳಗಳ ಬಾಧೆಯಿದ್ದಲ್ಲಿ (ಜಂತುಹುಳು, ಕೊಕ್ಕೆಹುಳು) ಅಲರ್ಜಿಯ ಪ್ರತಿಕ್ರಿಯೆಯಿಂದಾಗಿ ಒಣಕೆಮ್ಮು ಕಾಣಿಸಿ ಳ್ಳಬಹುದು.

ದೀರ್ಘಕಾಲದಿಂದ ಬೀಡಿ, ಸಿಗರೇಟ್ ಸೇದುವ ಅಭ್ಯಾಸ ುವವರಲ್ಲಿ ರಾತ್ರಿ ಹೊತ್ತು, ಬೆಳಗಿನ ಜಾವ ವಿಪರೀತ ಕೆಮ್ಮು ಣಿಸಿಕೊಳ್ಳಬುದುದ. ಆಗಾಗ ಕಾಣಿಸಿಕೊಳ್ಳುತ್ತಿರಬಹುದು.

ಶ್ವಾಸಕೋಶದ ಸೋಂಕಾದಾಗ (ನ್ಯೂಮೋನಿಯಾ ಇತ್ಯಾದಿ) ಆಗ ಸಹ ಅಲ್ಲಿ ಕೀವು ಉತ್ಪತ್ತಿಯಾಗುತ್ತದೆ. ಅದನ್ನು ಹೊರಹಾಕಲು ಆಗ ಕೆಮ್ಮು ಕಾಣಿಸಿಕೊಳ್ಳುತ್ತದೆ. ಶ್ವಾಸಕೋಶವನ್ನು ಬಹಳ ಕಾಲದವರೆಗೆ ಆಕ್ರಮಿಸಿ ತೊಂದರೆಯುಂಟುಮಾಡುವ ಇನ್ನೊಂದು ರೋಗವೆಂದರೆ "ಕ್ಷಯರೋಗ" (T. B.) ಇದರಲ್ಲೂ ಸಹ ಜ್ವರ, ಎದೆನೋವಿನೊಂದಿಗೆ ಕೆಮ್ಮು ಸಹ ಸಾಮಾನ್ಯ ಲಕ್ಷಣವಾಗಿರುತ್ತದೆ. ಕ್ಷಯ ರೋಗಿಗಳಲ್ಲಿ ಕೆಮ್ಮಿನೊಂದಿಗೆ ರಕ್ತ ಸಹ ಕಾಣಿಸಿಕೊಳ್ಳುತ್ತದೆ. ವಯಸ್ಸಾದವರಲ್ಲಿ ಕೆಮ್ಮಿನೊಂದಿಗೆ ರಕ್ತ ಕಾಣಿಸಿಕೊಳ್ಳುತ್ತಿದ್ದರೆ ಅದು ಶ್ವಾಸಕೋಶದ ಕ್ಯಾನ್ಸರ್‌ನ ಚಿಹ್ನೆಯೂ ಇರಬಹುದು.

ಕೆಮ್ಮಿನೊಂದಿಗೆ 'ಸಂಯ್' ಶಬ್ಧ ಸಹ ಬರುತ್ತಿದ್ದು ದಮ್ಮು ಸಹ ಇದ್ದಲ್ಲಿ ಅದು 'ಅಸ್ತಮಾ' ಕಾಯಿಲೆಯ ಲಕ್ಷಣವಾಗಿರಬಹುದು.

ಕೆಲವೊಂದು ಹೃದಯರೋಗಿಗಳಲ್ಲಿ ಸಹ ಕೆಮ್ಮು ಕಾಣಿಸಿ ಕೊಳ್ಳುತ್ತದೆ. ಈ ಕೆಮ್ಮು ಮಧ್ಯರಾತ್ರಿ ಇಲ್ಲವೇ ಬೆಳಗಿನ ಜಾವದ ವೇಳೆಯಲ್ಲಿ ಕಾಣಿಸಿಕೊಂಡು ವ್ಯಕ್ತಿಯನ್ನು ನಿದ್ರೆಯಿಂದ ಏಳುವಂತೆ ಮಾಡುತ್ತದೆ. ಬೆಳ್ಳನೆ ನೊರೆ ನೊರೆಯಾಗಿ ಕಫ ಬರಬಹುದು ಕೆಲವೊಮ್ಮೆ ರಕ್ತ ಸಹ ಇರಬಹುದು. ವ್ಯಕ್ತಿ ಕುಳಿತುಕೊಂಡಾಗ ಅಥವಾ ಒರಗಿ ಮಲಗಿಕೊಂಡಾಗ, ಸ್ವಚ್ಛ ಗಾಳಿ ಇರುವ ಕಡೆ ಹೋಗಿ ಗಾಳಿಯನ್ನು ಸೇವಿಸಿದಾಗ ಕೆಮ್ಮು ಕಡಿಮೆಯಾಗಬಹುದು. ಅಂಗಾತ ಮಲಗಿಕೊಂಡಲ್ಲಿ ಕೆಮ್ಮು ಜಾಸ್ತಿಯಾಗಬಹುದು.

ಕೆಮ್ಮು ಹಲವಾರು ವರ್ಷಗಳಿಂದ ಇದ್ದು ಜಾಸ್ತಿ ಕಫ ಬರುತ್ತಿದ್ದು ಕಫ ವಾಸನೆಯಿಂದ ಕೂಡಿದ್ದರೆ ಅದು ಶ್ವಾಸನಾಳಗಳ ಹಿಗ್ಗುವಿಕೆ (ಬ್ರಾಂಕಿಯೆಕ್ಟಾಸಿಸ್)ಯ ಲಕ್ಷಣವಾಗಿರಬಹುದು.

ಚಿಕ್ಕ ಮಕ್ಕಳನ್ನು ಬಹುದಿನಗಳವರೆಗೆ ಕಾಡಿಸುವ, ಕೆಮ್ಮುವಿಗೆ ನಾಯಿಕೆಮ್ಮು ಸಹ ಕಾರಣವಾಗಿರಬಹುದು.

**ಪರಿಹಾರ :**

1. ಆಗಾಗ ಒಣಕೆಮ್ಮು ಬರುತ್ತಿದ್ದು ಅತಿಯಾಗಿ ಕಿರಿಕಿರಿ ಯಾಗುತ್ತಿದ್ದಲ್ಲಿ ಕೆಮ್ಮನ್ನು ಶಮನ ಮಾಡುವ ಸಿರಪ್ (ಕೋಡಿನ್, ಆಂಟಿಹಿಸ್ಟಮಿನ್ ಇತ್ಯಾದಿ ಅಂಶವಿರುವ ಔಷಧ) ಬಳಸಬಹುದು.

2. ಕೆಮ್ಮಿನ ಜೊತೆಗೆ ಕಫ ಸಹ ಬರುತ್ತಿದ್ದಲ್ಲಿ ಕೆಮ್ಮನ್ನು ನಿಲ್ಲಿಸುವ ಔಷಧ ಬಳಸಬಾರದು. ಬದಲಾಗಿ ಕಫವನ್ನು ಕರಗಿಸಿ ಅದನ್ನು ಹೊರಹಾಕಲು ಸಹಾಯಕವಾಗುವ ಔಷಧ(Expectorent) ವನ್ನು ಬಳಸಬೇಕು. ಇಲ್ಲದಿದ್ದಲ್ಲಿ ದೇಹದ ರಕ್ಷಣಾಕ್ರಿಯೆಯನ್ನೇ ನಿಲ್ಲಿಸಲು ಹೊರಟಂತಾಗುತ್ತದೆ.

3. ಕುದಿಸಿ ಆರಿಸಿದ (ಉಗುರು ಬೆಚ್ಚಗಿನ) ನೀರನ್ನು ಜಾಸ್ತಿ ಕುಡಿಯಿರಿ (ದಿನಕ್ಕೆ ಮೂರು ಲೀಟರ್‌ಗಿಂತಲೂ ಜಾಸ್ತಿ) ಇದರಿಂದ ಕಫ ಕರಗಿ ಹೊರಬರಲು ಸಹಾಯವಾಗುತ್ತದೆ. ಬಿಸಿನೀರಿನ ಹಬೆ ಸೇವಿಸಿ.

4. ನೆನಪಿಡಿ ಕೆಮ್ಮನ್ನು ಗುಣಪಡಿಸಬೇಕಾದಲ್ಲಿ ಕೆಮ್ಮಿಗೆ ಕಾರಣವಾಗುವ ಅಂಶವನ್ನು ಕಂಡುಹಿಡಿದು ಅದಕ್ಕೆ ಔಷಧ ಕೊಡುವುದೇ ಸರಿಯಾದ ಕ್ರಮ. ಇಲ್ಲದಿದ್ದಲ್ಲಿ ಕೆಮ್ಮಿಗೆ ಬಾಟ್ಲುಗಟ್ಟಲೆ

ಸಿರಪ್ ಕುಡಿಯುತ್ತಾ ಹೋದರೂ ಕೆಮ್ಮು ಕ್ಷಣಕಾಲ ಕಡಿಮೆ ಯಾಗುತ್ತದೆಯೇ ಹೊರತು ವಾಸಿಯಾಗದು ! ಸೋಂಕು (Infection) ಇದ್ದಲ್ಲಿ ಸೂಕ್ತವಾದ ಜೀವರೋಧಕ (Antibiotics) ಔಷಧದ ಒಂದು ಕೋರ್ಸ್ (5 ರಿಂದ 7ದಿನಗಳು) ತಪ್ಪದೆ ತೆಗೆದುಕೊಳ್ಳ ಬೇಕಾಗುತ್ತದೆ.

5. ಬೀಡಿ ಸಿಗರೇಟ್ ಅಭ್ಯಾಸವಿದ್ದಲ್ಲಿ ಅದನ್ನು ತ್ಯಜಿಸಿ ಧೂಮಪಾನ ಮಾಡುತ್ತಾ ಒಣಕೆಮ್ಮು ಬರುತ್ತದೆ, ಆಗಾಗ ಕೆಮ್ಮಿನಿಂದ ತೊಂದರೆಯಾಗುತ್ತದೆ ಅಂತ ದಯವಿಟ್ಟು ಹೇಳಬೇಡಿ. ಏಕೆಂದರೆ ಕೆಮ್ಮು ಮತ್ತು ಧೂಮಪಾನ ಬಹಳ ಸ್ನೇಹಿತರು ಒಂದನ್ನೊಂದು ಬಿಟ್ಟು ಇರಲಾರರು ! ಜೊತೆಗೆ ಆ ಹೊಗೆ ನಿಮ್ಮ ಶ್ವಾಸಕೋಶವನ್ನು ಪೂರ್ಣವಾಗಿ ನಾಶಪಡಿಸಿತು ಜೋಕೆ?!

6. ಧೂಳು, ಪರಿಸರ ಮಾಲಿನ್ಯ, ಯಾವುದೇ ತರದ ಅಲರ್ಜಿ ಯುಂಟು ಮಾಡುವ ವಸ್ತುಗಳು ಕೆಮ್ಮಿಗೆ ಕಾರಣವಾಗಿದ್ದಲ್ಲಿ ಅವುಗಳಿಂದ ದೂರವಿರಲು ಪ್ರಯತ್ನಿಸಿ, ಹುಳಗಳ ಬಾಧೆಯಿದ್ದಲ್ಲಿ ಅದಕ್ಕೆ ಔಷಧ ಸೇವಿಸಿ.

7. ಬಹಳ ಸಮಯದಿಂದ ಕೆಮ್ಮು ಇರುವವರು (15 ದಿನಕ್ಕಿಂತಲೂ ಜಾಸ್ತಿ) ನಿರ್ಲಕ್ಷಿಸದೆ ವೈದ್ಯರನ್ನು ಕಂಡು ಅವರ ಸಲಹೆಗನುಗುಣವಾಗಿ ನಡೆಯಿರಿ. ಕೆಮ್ಮಿಗೆ ಕಾರಣವನ್ನು ಕಂಡು ಹಿಡಿಯಲು ಶ್ವಾಸಕೋಶದ ಎಕ್ಸ್‌ರೇ ಕೆಲವೊಂದು ರಕ್ತ ಪರೀಕ್ಷೆ ಇತ್ಯಾದಿ ಮಾಡಬೇಕಾಗಬಹುದು.

8. ಕ್ಷಯ ರೋಗ, ಕೆಲವೊಂದು ಹೃದಯರೋಗ, ಅಸ್ತಮಾ... ಇತ್ಯಾದಿ ಕಾಯಿಲೆಗಳು ಕೆಮ್ಮಿಗೆ ಕಾರಣವಾಗಿದ್ದಲ್ಲಿ ಅವಕ್ಕೆ ಚಿಕಿತ್ಸೆ ನೀಡಬೇಕಾಗುತ್ತದೆ.

**ಡಾ. ಪ್ರವೀಣ ಎನ್. ಎಸ್.**
**M.B.B.S., M.D. (OBG), D.N.B.**
**ಕೇರಳ**



## ಅರ್ಜಿ ಆಹ್ವಾನ

ಮುಂಬರುವ ಏಪ್ರಿಲ್ ತಿಂಗಳಲ್ಲಿ ನಡೆಯುವ ಪಿ.ಯು.ಸಿ. ಪರೀಕ್ಷೆಗೆ ಖಾಸಗಿಯಾಗಿ ಹಾಜರಾಗಲು ಬಯಸುವ ಬಾಹ್ಯ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. 31-03-2000 ಇಸವಿಗೆ 18 ವರ್ಷ ಪೂರ್ಣವಾಗುವ ಎಸ್. ಎಸ್. ಎಲ್.ಸಿ. ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದು

ಆಸಕ್ತ ಅಭ್ಯರ್ಥಿಗಳು ತಮಗೆ ಸಮೀಪದ (ಪಿ.ಯು.ಸಿ. ಶಿಕ್ಷಣ ಬೋಧಿಸುವ) ಸರ್ಕಾರಿ ಕಾಲೇಜಿನಲ್ಲಿ ಹೆಸರು ನೋಂದಾಯಿಸಿ ಕೊಳ್ಳಬಹುದು ಮತ್ತು ಹೆಚ್ಚಿನ ವಿವರಗಳನ್ನು ಪಡೆದುಕೊಳ್ಳಬಹುದು. ಅರ್ಜಿ ಸಲ್ಲಿಸಲು 15-9-99 ಕೊನೆಯ ದಿನವಾಗಿದೆ.

**ಕೊಡಗು ಸಂಗಾತಿ, ಪಾಕ್ಷಿಕ ಅನ್ನು ಕೊಂಡು ಓದಿರಿ.**

ನಮ್ಮ ಜನಾಂಗವು ವೀರರು ಹೌದು ಧೀರರು ಹೌದು ಅನ್ನು
ಸಾಕ್ಷಿಯಾಗಿ ಇವರ ಸಾಹಸ ಶೌರ್ಯಕ್ಕೆ ಸಿಕ್ಕಿದ ಶೌರ್ಯ ಪ



ಎಡದಿಂದ ಸೋಮೆಟ್ಟಿ ಕೆಂಚಪ್ಪ, ಕುಂಭಗೌಡನ ಕೆ. ಗೋಪಾಲ ಹ ಸೋಮೆಟ್ಟಿ ಗಣಪತಿ, ಇವರು ಮಕ್ಕಂದೂರು ಗ್ರಾಮಸ್ಥರು

ದಿನಾಂಕ 25-7-1999ರಂದು ಮಡಿಕೇರಿ ತಾಲ ಕಾಲೂರು ಗ್ರಾಮದಲ್ಲಿ ಭಾರೀ ಮಳೆಯಿಂದಾಗಿ ಸೇತುವೆ ಮೇಲ ಹರಿಯುತ್ತಿದ್ದು, ಈ ಸಂದರ್ಭ ಸೇತುವೆ ದಾಟುತ್ತಿದ್ದ ಸ್ಥ ಐಲಪಂಡ ಬೆಳ್ಯಪ್ಪ, ಹಾಗೂ ಕಾರೇರ ಮುದ್ದಪ್ಪನವರು ಪ್ರವಾಹದಲ್ಲಿ ಕೊಚ್ಚಿ ಹೋಗಿ ದುರ್ಮರಣಕ್ಕೆ ಒಳಗಾಗಿ, ಪೋ ಇಲಾಖೆ ಹಾಗೂ ಗ್ರಾಮಸ್ಥರು ಸತತ ಒಂದು ವಾರ ಶೋ ನಡೆಸಿದರೂ ಸಿಗದಿದ್ದಾಗ ದಿನಾಂಕ 31-7-1999ರಂದು 6-45 ರ ಸಮಯದಲ್ಲಿ ಕೊಚ್ಚಿ ಹೋದ ಸ್ಥಳದಿಂದ ಸುಮಾರು ಕಿ. ಮೀ. ದೂರದಲ್ಲಿ ಕಾಲೂರು (ಅಭಿಧಾರೆ) ಹೊಳೆಯ ಪ್ರವಾಹದಲ್ಲಿ ಭಾರಿ ಗಾತ್ರದ ಶವವೊಂದು ಕೊಚ್ಚಿ ಹೋಗುವ ಅನತಿ ದೂರದಿಂದ ಕೊಚ್ಚೇರ ಮುದ್ದಯ್ಯನವರು ಕಂಡು ಮಗನೊಂದಿಗೆ ಕುಂಭಗೌಡನ ಕೆ. ಗೋಪಾಲ, ಸೋಮೆಟ್ಟಿ ಗ ಸೋಮೆಟ್ಟಿ ಕೆಂಚಪ್ಪನವರಿಗೆ ತಿಳಿಸಿ ಕೂಡಲೇ ಎಲ್ಲರೂ ಕಾ ಪ್ರವರ್ತರಾಗಿ ಸುಮಾರು ಮೂರು ಕಿ. ಮೀ. ದೂರದವರೆಗೆ ಶವ ಹಿಂಬಾಲಿಸಿ, ಕೆಲವೆಡೆ ನೀರಿನ ಪ್ರವಾಹದಲ್ಲಿ ಈಜಿ ಛಲ ಶವವನ್ನು ದಡ ಸೇರಿಸುವಲ್ಲಿ ಸಫಲರಾದದು ಸಾಹಸವೇ ಮತ್ತೊಂದು ಶವವು ಅರ್ಧ ಕಿ. ಮೀ. ಹಿಂದೆ ಕೊಚ್ಚೆಯೊಂ ಸಿಕ್ಕಿರುವುದನ್ನು ಕಂಡು ಕೂಡಲೇ ಗೋಪಾಲನವರು ಮನೆಗೆ ಬಂದು ದೂರವಾಣಿ ಮೂಲಕ ಪೋಲಿಸ್ ಇಲಾಖೆ ಸಂಪರ್ಕಿಸಿದ ಕೂಡಲೆ ಡಿ.ವೈ.ಎಸ್ಪಿ. ಕೇಶವನಂದ ಹ ಸಿಬ್ಬಂದಿಯವರು ಸ್ಥಳಕ್ಕೆ ಬಂದು ಗ್ರಾಮಸ್ಥರ ಸಹಕಾರ ಇನ್ನೊಂದು ಶವವನ್ನು ದಡ ಸೇರಿಸಲು ಸಫಲರಾದರು. ಜಿಲ್ಲಾಧಿಕಾರಿ, ಪೋಲೀಸ್ ಉನ್ನತಾಧಿಕಾರಿ, ನೂರಾರು ಗ್ರಾಮ ಹಾಗೂ ಶವದ ಸಂಬಧಿಕರು ಆಗಮಿಸಿ ಮೇಲಿನ ಯುವಕರ ಸಾ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರಲ್ಲದೆ ಆಗಸ್ಟ್ 15ರ ಸ್ವಾ ದಿನಾಚರಣೆಯಂದು ಮಡಿಕೇರಿ ಕೋಟೆ ಆವರಣದಲ್ಲಿ ಸಾರ್ವಜನಿಕ ಸಭೆಯಲ್ಲಿ ಮೇಲಿನ ಐದು ಜನ ಸಾಹಸಿ ಜಿಲ್ಲಾಧಿಕಾರಿ ಜಯರಾಮರಾಜೇ ಅರಸ್ ಶೌರ್ಯ ಪ್ರಶಸ್ತಿ ಗೌರವಿಸಿದರು.

**ಕುಂಭಗೌಡನ ವಿನೋ**
**ಕೂರ್ಗ್ ಲ್ಯಾಂಡ್ ಮಾರ್ಕ್ಸ್, ಮಡಿ**



# ಕೊಡಗಿನ ಅರೆಭಾಷೆ ಗೌಡರು

ದಂಬೆಕೋಡಿ ಮಾದಪ್ಪ

**ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದ ಕೊಡಗಿನ ಅರೆಭಾಷೆ ಗೌಡರು ಸ್ವಂತ ನೆಲದಲ್ಲೇ ಅನ್ನ, ಶಿಕ್ಷಣ, ಸಮಾನತೆಗಾಗಿ ನಡೆಸಿದ ಹೋರಾಟ ಗಾಥೆ ಇದು. ಕರ್ನಾಟಕದ ಯಾವುದೇ ಜಿಲ್ಲೆಯಲ್ಲಿ ಒಕ್ಕಲಿಗರು ಎದುರಿಸದ ಆತಂಕ, ನೋವು, ಅವಮಾನದ ಚಿತ್ರಣ ಇಲ್ಲಿದೆ......**





ದಂಬೆಕೋಡಿ ಚಿಣ್ಣಪ್ಪ

1977 ವಿಧಾನಸಭಾ ಚುನಾವಣೆ. ಮಡಿಕೇರಿ ಕ್ಷೇತ್ರದಲ್ಲಿ ಾಂಗ್ರೆಸ್‌ನಿಂದ ಎಂ. ಸಿ. ನಾಣಯ್ಯ ಅಭ್ಯರ್ಥಿಯಾದರೆ ಹೊದ್ದೆಟ್ಟಿ ೀಕಪ್ಪ ಡಮ್ಮಿ ಅಭ್ಯರ್ಥಿ, ಜನತಾಪಕ್ಷದಿಂದ ಎ. ಕೆ. ಸುಬ್ಬಯ್ಯ ಭ್ಯರ್ಥಿಯಾದರೆ ದಂಬೆಕೋಡಿ ಚಿಣ್ಣಪ್ಪ ಡಮ್ಮಿ ಅಭ್ಯರ್ಥಿ, ರೆಡ್ಡಿ ಾಂಗ್ರೆಸ್‌ನಿಂದ ಎ. ಎಂ. ಬೆಳ್ಯಪ್ಪ ಅಭ್ಯರ್ಥಿಯಾದರೆ ದಂಬೆಕೋಡಿ ಲಜಾಕ್ಷಿ ಜೋಯಪ್ಪ ಡಮ್ಮಿ ಅಭ್ಯರ್ಥಿ, ಕಮ್ಯುನಿಸ್ಟ್ ಪಕ್ಷದಿಂದ ಟ್ಟಪ್ಪ ಅಭ್ಯರ್ಥಿಯಾದರೆ ಯಾಲದಾಳು ಅಯಪ್ಪ ಡಮ್ಮಿ ಅಭ್ಯರ್ಥಿ.

ವಿವಿಧ ಪಕ್ಷಗಳಿಂದ ಅಧಿಕೃತ ಅಭ್ಯರ್ಥಿಗಳಾಗುವ ಸೌಭಾಗ್ಯ ಡೆದವರೆಲ್ಲ ಕೊಡವರು. ಡಮ್ಮಿ ಅಭ್ಯರ್ಥಿಗಳಾದವರೆಲ್ಲ ಅರೆಭಾಷೆ ಡರು. ಇಂಗ್ಲೀಷರ ವಿರುದ್ಧ "ಅಮರ ಸುಳ್ಯದ ಕಾಟಕಾಯಿ" ಖ್ಯಾತಿಯ ಸ್ವಾತಂತ್ರ್ಯ ಸಂಗ್ರಾಮ ನಡೆಸಿದ್ದ ಅರೆಭಾಷೆ ಗೌಡರು ಡವರ ಏಕಸ್ವಾಮ್ಯದ ವಿರುದ್ಧ ತಿರುಗಿ ನಿಲ್ಲುವ ಅನಧಿಕೃತ ಂಡಾಯವನ್ನು 1977ರಲ್ಲಿ ಸಾರಿದರು. ಯಾರು ಈ ಅರೆಭಾಷೆ ಡರು?

ಕೊಡಗಿನ ಮೂಲನಿವಾಸಿಗಳಾಗಿದ್ದರೂ, ಕೊಡವರಂತೆ ಮ್ಮಾ ಭೂಮಿ ಹೊಂದಿದವರಾಗಿದ್ದರೂ, ಕೊಡವರಂತೆ ಕೋವಿ ಡೆದಿದ್ದರೂ ಕೊಡಗಿನಲ್ಲಿ ಡಮ್ಮಿಗಳಾಗಿಯೇ ಬದುಕಿದ ಸಹನಶೀಲರೇ ಈ ಅರೆಭಾಷೆಗೌಡರು.

ಭಾರತದಲ್ಲಿ ಮುಸ್ಲಿಮರು ಎರಡನೇ ದರ್ಜೆ ಪ್ರಜೆಗಳಾಗಿರುವಂತೆ ೊಡಗಿನಲ್ಲಿ ಎಲ್ಲ ಅವಕಾಶಗಳಿಂದ ವಂಚಿತರಾದವರು ಈ ಜನ.

ಈಗ ಮಂಗಳೂರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವ ಸುಳ್ಯ ಾಲೂಕು ಮತ್ತು ಅದಕ್ಕೆ ತಗಲಿಕೊಂಡಿರುವ ಮಡಿಕೇರಿ ತಾಲೂಕಿನ ಬಹುತೇಕ ಗ್ರಾಮಗಳಲ್ಲಿರುವ ಬಹುಸಂಖ್ಯಾತರು ಈ ಅರೆಭಾಷೆ ಗೌಡರು.

"ನಾ ಹೋನೆ. ನಾ ಬನ್ನೆ" (ನಾನು ಹೋಗುತ್ತೇನೆ, ನಾನು ಬರುತ್ತೇನೆ). "ಹೋತುಗಡ, ಬಾತುಗಡ" (ಹೋದರು, ಬಂದರು) ಎಂಬ ಭಾಷೆ ಮಾತನಾಡುವ ಈ ಮಂದಿಯನ್ನು ಅರೆಭಾಷೆ ಗೌಡರೆಂದು ಕರೆಯಲಾಗುತ್ತದೆ. ನಡುಗನ್ನಡಕ್ಕೆ ಹತ್ತಿರವಿರುವ, "ನಾನು ಹೋಗುತ್ತೇನೆ" ಎನ್ನುವುದಕ್ಕೆ "ನಾ ಹೋನೆ" ಎಂದು ಸಂಕ್ಷಿಪ್ತವಾಗಿ ಮಾತನಾಡುವುದರಿಂದ ಈ ಭಾಷೆಯನ್ನು ಅರೆಭಾಷೆ (ಅರ್ಧ ಭಾಷೆ?) ಎಂದು ಕರೆಯಲಾಗುತ್ತದೆ. "ನಮ್ಮ ಭಾಷೆ ಕಂಪ್ಯೂಟರ್ ಭಾಷೆಯಾಗುವಷ್ಟು ಸಂಕ್ಷಿಪ್ತವಾಗಿದೆ. ಸೊಗಸಾಗಿದೆ" ಎಂದು ಅರೆಭಾಷೆಗೌಡ ಜನಾಂಗಕ್ಕೆ ಸೇರಿದ ಮಡಿಕೇರಿ ಮಾಜಿ ಶಾಸಕ ದಂಬೆಕೋಡಿ ಮಾದಪ್ಪ ಹೆಮ್ಮೆ ಮತ್ತು ಪ್ರೀತಿಯಿಂದ ಹೇಳಿಕೊಳ್ಳುತ್ತಾರೆ.

ಎರಡನೇ ಜಾಗತಿಕ ಯುದ್ಧಕ್ಕೆ ಮೊದಲು ಸುಳ್ಯ ಕೂಡಾ ಕೊಡಗಿನ ಒಂದು ಭಾಗವಾಗಿತ್ತು (ಈಗ ವಿಶಾಲ ಕೊಡಗಿನ ಬ್ಗಗೆ ಯೋಚಿಸುತ್ತಿರುವವರೆಲ್ಲ ಸುಳ್ಯ ಮತ್ತೆ ಕೊಡಗಿಗೇ ಸೇರಬೇಕೆಂದು ಬಯಸುತ್ತಿದ್ದಾರೆ.)

ನೋವು, ಅವಮಾನ, ಅಸಮಾನತೆಯ ಬೆಂಕಿಯಲ್ಲಿ ಬೆಂದ ಅರೆಭಾಷೆಗೌಡರಿಗೆ ಆರ್ಥಿಕ ಬಲ ಇರಲಿಲ್ಲ, ಶಿಕ್ಷಣ ಇರಲಿಲ್ಲ, ಸಾಮಾಜಿಕ ಪ್ರತಿಷ್ಠೆ ಇರಲಿಲ್ಲ. ಆದರೆ ಅವರಲ್ಲಿ ಸಹನೆ ಇತ್ತು. ಅವರಿಗೆ ಸಹಬಾಳ್ವೆಯ ಮಹತ್ವ ಗೊತ್ತಿತ್ತು. ಸ್ವಾತಂತ್ರ್ಯದ ಅರ್ಥ ಗೊತ್ತಿತ್ತು. ಇತರರನ್ನು ಹೀಯಾಳಿಸದೆ ಎದೆ ಎತ್ತಿ ನಡೆಯುವ ಛಲ, ಸ್ವಾಭಿಮಾನವೂ ಇತ್ತು.

ಮಳೆಗಾಲದಲ್ಲಿ ಅಡಿಕೆ ಹಾಳೆಯಿಂದ ಮಾಡಿದ ಟೋಪಿ ಹಾಕಿಕೊಳ್ಳುತ್ತಿದ್ದರಿಂದ ಅವರನ್ನು ಕೆಲವರು ಕೊಟ್ಟಪಾಳೆ (ಕೊಟ್ಟ ಎಂದರೆ ಅಡಿಕೆ, ಪಾಳೆ ಎಂದರೆ ಹಾಳೆ) ಎಂದು ಗೇಲಿ ಮಾಡುತ್ತಿದ್ದ ದಿನಗಳೂ ಇದ್ದವು. ತುಂಬ ಶ್ರಮಿಕರಾದ ಅರೆಭಾಷೆಗೌಡರು "ಕೊಟ್ಟ ಪಾಳೆ" ಆಶ್ರಯಕ್ಕೆ ಕೃತಜ್ಞರಾಗಿದ್ದರೂ ಅವಮಾನಿಸುವ ಉದ್ದೇಶದಿಂದಲೇ 'ಕೊಟ್ಟಪಾಳೆ' ಎಂದು ಕರೆದಾಗ ತಿರುಗಿ ನಿಲ್ಲುವ ಎದೆಗಾರಿಕೆ ತೋರಿದರು.

### ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅರೆಭಾಷೆಗೌಡರು

ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದಂತೆ ಕೊಡಗು, ಮಂಗಳೂರು ಪ್ರಾಂತ್ಯದಲ್ಲಿ "ಕೆನರಾ ಬಂಡಾಯ" ಎಂದು ಪ್ರಸಿದ್ಧವಾಗಿರುವ ಹೋರಾಟದಲ್ಲಿ ಅರೆಭಾಷೆಗೌಡರು ಸಕ್ರಿಯವಾಗಿ ಪಾಲ್ಗೊಂಡಿದ್ದರು. ಇದಕ್ಕೆ ಅರೆಭಾಷೆ ಗೌಡರಿಗೆ ಸಿಕ್ಕ ಪ್ರತಿಫಲವೇನು ಗೊತ್ತೇ?

ಕೊಡಗಿನ ಮಹಾನ್ ಸ್ವಾತಂತ್ರ್ಯ ಹೋರಾಟಗಾರರೆಂದು ಇತಿಹಾಸದಲ್ಲಿ ದಾಖಲಾಗಿರುವ ಗುಡ್ಡೆಮನೆ ಅಪ್ಪಯ್ಯನವರನ್ನು ಇಂಗ್ಲೀಷರು 31-10-1837ರಲ್ಲಿ ಗಲ್ಲಿಗೇರಿಸಿದರು. ಕೊಡಗಿನ

ಹೆಮ್ಮೆಯ ಸೇನಾಧಿಕಾರಿಗಳಾದ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಮತ್ತು ಜನರಲ್ ತಿಮ್ಮಯ್ಯ ಅವರ ಪ್ರತಿಮೆಗಳನ್ನು ಪ್ರತಿಷ್ಠಾಪಿಸಲಾಗಿದ್ದರೂ ಮಹಾನ್ ಸ್ವಾತಂತ್ರ್ಯ ಹೋರಾಟಗಾರ ಗುಡ್ಡೆಮನೆ ಅಪ್ಪಯ್ಯನವರಿಗೆ ಈ ಗೌರವ ಸಿಕ್ಕಲಿಲ್ಲ. ಎಷ್ಟೋ ಒತ್ತಡ, ಹೋರಾಟದ ನಂತರ ಮಡಿಕೇರಿ ಜೂನಿಯರ್ ಕಾಲೇಜು ರಸ್ತೆಗೆ ಗುಡ್ಡೆಮನೆ ಅಪ್ಪಯ್ಯ ರಸ್ತೆ ಎಂದು ಹೆಸರಿಡುವಂತಾಯಿತು. 1943ರಲ್ಲಿ ಕೊಡಗಿನಲ್ಲಿ ಇಂಗ್ಲಿಷರು ಆರಂಭಿಸಿದ್ದ "ಕಾನ್ಸಾಲಿಡೇಟೆಡ್ ಕಾಫಿ" ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದ ನಲ್ವತ್ತು ಮಂದಿ ಅರಭಾಷೆ ಗೌಡರನ್ನು ಸಂಸ್ಥೆಯ ಮುಖ್ಯಸ್ಥ ಐವರ್ ಬುಲ್ ವಜಾ ಮಾಡಿದರು. ಹೀಗೆ ವಜಾಗೊಂಡವರಲ್ಲಿ ಶಾಸಕ ಮಾದಪ್ಪನವರ ತಂದೆ ಸುಬ್ರಾಯ ಕೂಡ ಒಬ್ಬರು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದ ಅರೆಭಾಷೆಗೌಡರಿಗೆ ಇಂಥ ಬಹುಮಾನ ಸಿಕ್ಕರೆ, ಕೊಡಗಿನ ಇತರ ಕೆಲವರಿಗೆ ಇಂಗ್ಲಿಷರು ರಾವ್ ಬಹದ್ದೂರ್, ದಿವಾನ್ ಎಂಬ ಬಿರುದು, ಪದವಿಗಳನ್ನು ಕೊಟ್ಟು, ಜಾಗ ಜಮೀನು ನೀಡಿ ಸಂತೃಪ್ತರಾಗಿ ಇರುವಂತೆ ಮಾಡಿದ್ದರು.

**ಗೌಡರ ಎತ್ತಂಗಡಿ**

ಹಣ, ಶಿಕ್ಷಣ, ಬೆಂಬಲ ಇಲ್ಲದ ಅದೆಷ್ಟೋ ಅರೆಭಾಷೆ ಗೌಡರು ಸುಳುಗೋಡು ಎಂಬ ಕಾಡಿನಲ್ಲೂ ವಾಸಿಸಲು ಆರಂಭಿಸಿದ್ದರು. ಆದರೆ ಹೀಗೆ ನೆಲಸಿದ್ದ ಸುಮಾರು 200 ಅರೆಭಾಷೆ ಜನಾಂಗದ ಕುಟುಂಬಗಳನ್ನು 1978ರಲ್ಲಿ ಆನೆಗಳ ನೆರವಿನಿಂದ ಅಮಾನವೀಯವಾಗಿ ಹೊರಗಟ್ಟಲಾಯಿತು. ಆನಂತರ ಕೆಲವರಿಗೆ ಸಿದ್ದಾಪುರದಿಂದ ಹತ್ತು ಕಿ. ಮೀ. ದೂರದಲ್ಲಿರುವ ಗುಡ್ಲೂರಿನಲ್ಲಿ ಜಾಗ ನೀಡಲಾಯಿತು. ಈ ಅಮಾನವೀಯ ಒಕ್ಕಲೆಬ್ಬಿಸುವಿಕೆ ವಿರುದ್ಧ ಹೋರಾಟ ಮಾಡುವವರು ಯಾರೂ ಇರಲಿಲ್ಲ. ಬಡ, ಮುಗ್ಧ ಅರೆಭಾಷೆಗೌಡರು ಮೌನದಲ್ಲೇ ನೋವು ನುಂಗಿದರು. ಆದರೆ ಆನಂತರದ ವರ್ಷಗಳಲ್ಲಿ ಹೀಗೆ ಕಾಡಿನಲ್ಲಿ ಜಾಂಡಾ ಹೊಡೆದ ಕೇರಳಿಯರಿಗೂ ಜಾಗ ಸಕ್ರಮಗೊಳಿಸಲಾಯಿತು. ಆದರೆ ಮೂಲ ನಿವಾಸಿಗಳಾದ ಅರೆಭಾಷೆ ಗೌಡರಿಗೆ ಸ್ವಂತ ನೆಲದಲ್ಲೇ ಇಂಚೂ ಜಾಗ ಪಡೆಯದಂತೆ ವ್ಯವಸ್ಥಿತವಾಗಿ ನೋಡಿಕೊಳ್ಳಲಾಯಿತು.

ಇಂಗ್ಲಿಷ್ ಅನುಕರಣೆ, ಹೊಸ ಆಲೋಚನೆ, ವೈಭೋಗದ ಜೀವನಕ್ಕೆ ಮಾರುಹೋದ ಅದೆಷ್ಟೋ ಕೊಡವರೆದುರು ಅರೆಭಾಷೆ ಗೌಡರು ಸರಿಸಾಟಿಯಾಗಿ ನಿಲ್ಲುವ ಅವಕಾಶದಿಂದ ಅದೆಷ್ಟೋ ಸಲ ವಂಚಿತರಾಗಿದ್ದರು. ದಕ್ಷಿಣ ಕನ್ನಡದಲ್ಲಿ ಬಂಟರೆದುರು ಬಿಲ್ಲವರಿದ್ದಂತೆ ಕೊಡಗಿನಲ್ಲಿ ಕೊಡವರೆದುರು ಅರೆಭಾಷೆಗೌಡರ ಸ್ಥಿತಿಯಾಗಿತ್ತು.

ಆತ್ಮಗೌರವಕ್ಕಾಗಿ ಹಾತೊರೆಯುತ್ತ ಬೆಳೆದ ಈ ಮಂದಿ ಕ್ರಮೇಣ ನಿಜ ಶಿಕ್ಷಣ ಪಡೆದರು, ಶ್ರಮದಿಂದಲೇ ಒಂದಷ್ಟು ಮಂದಿ ಸಿರಿವಂತರಾದರು, ಸಹನೆ ಸಹಬಾಳ್ವೆಗೆ ಮಾದರಿಯಾದರು.

**ನಿಡ್ಯಮಲೆ ಮುದ್ದಪ್ಪ**

ಇಂಥ ನೊಂದ ಅರೆಭಾಷೆ ಗೌಡರಿಗೆ ಆತ್ಮಗೌರವದ ಪಾಠ ಕಲಿಸಿದವರು ನಿಡ್ಯಮಲೆ ಮುದ್ದಪ್ಪ. ಅರೆಭಾಷೆ ಗೌಡ ಜನಾಂಗದ ಮೊಟ್ಟಮೊದಲ ಜಿಲ್ಲಾ ನ್ಯಾಯಾಧೀಶರಾಗಿದ್ದವರು. ಕೊಡಗಿನ ಮೊಟ್ಟ ಮೊದಲ ಲೋಕಸಭಾ ಸದಸ್ಯ ನಿಡ್ಯಮಲೆ ಸೋಮಣ್ಣ ಅರೆಭಾಷೆಗೌಡರ ಅರ್ಹ ರಾಜಕೀಯ ಪ್ರತಿನಿಧಿಯಾಗಿ ಕಂಗೊಳಿಸಿ
1952ರಲ್ಲಿ ಲೋಕಸಭಾ ಸದಸ್ಯರಾದ ನಿಡ್ಯಮಲೆ ಸೋವ
ನಿಜಕ್ಕೂ ಕೊಡಗು ಸರ್ಕಾರದಲ್ಲಿ ಮುಖ್ಯಮಂತ್ರಿ ಅಥವಾ ಮ
ಆಗಬೇಕಾದ ಸಾಮರ್ಥ್ಯ, ಅರ್ಹತೆ, ಪ್ರತಿಭೆ ಇದ್ದವರು. ಕೊ
ಸರ್ಕಾರದಲ್ಲಿ ಕಾಂಗ್ರೆಸ್ ಶಾಸಕರಾಗಿದ್ದ ಸೋಮಣ್ಣನವ
ಬಡ್ತಿಯ ನೆಪದಲ್ಲಿ ಎಂಪಿಯಾಗಿಸಿ ವ್ಯವಸ್ಥಿತವಾಗಿ ಮೂಲೆಗು
ಮಾಡಲಾಯಿತು. ಕೇಂದ್ರದಲ್ಲಿ ರೈಲ್ವೇ ಮಂತ್ರಿಯಾಗಿದ್ದ ಸಿ.
ಪೂಣಚ್ಚನವರೂ ಈ ನಿಡ್ಯಮಲೆ ಸೋಮಣ್ಣನವರ ಶಿಷ್ಯರು.

ಕೊಡಗು ಸರ್ಕಾರ ಇದ್ದಾಗ ಡೆಪ್ಯುಟಿ ಸ್ಪೀಕರ್ ಆಗಿದ್ದ ಕೊ
ದೇವಯ್ಯ, ಖ್ಯಾತ ಇತಿಹಾಸಜ್ಞರಾದ ಪೆರಾಜೆಯ ಕೋಡಿ
ಕುಶಾಲಪ್ಪ, ಅಡ್ವೋಕೇಟ್ ಜನರಲ್ ಆಗಿದ್ದ ಮಾವಾಜಿ ಜನಾರ್ಧ
ಕೊಡಗು ಸರ್ಕಾರದಲ್ಲಿ ಶಾಸಕರಾಗಿದ್ದ ಪಾಂಡನ ಸುಬ್ಬಯ್ಯ, ಮಡಿ
ಪುರಸಭಾ ಅಧ್ಯಕ್ಷರಾಗಿದ್ದ ಮುಕ್ಕಾಟಿ ವಾಸುದೇವ್, ಉಪಾಧ್ಯಕ್ಷರಾ
ತೋಟಂಬೈಲು ಚಂಗಪ್ಪ ಅರೆಭಾಷೆಗೌಡ ಜನಾಂಗಕ್ಕೆ ಸೇರಿದವ
"ಮೂರು ದಾರಿಗಳು" ಕನ್ನಡ ಚಿತ್ರ ನಿರ್ಮಾಪಕರೂ, ಈಗಿನ 'ಕೊ
ಪ್ರಜಾವೇದಿಕೆ'ಯ ಸಂಚಾಲಕರೂ ಆಗಿರುವ ಸಂಪಾಜೆಯ ಎನ್. ಎ
ದೇವಿಪ್ರಸಾದ್; ಸುಳ್ಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ ಕುರು
ವೆಂಕಟ್ರಮಣಗೌಡರೂ ಇದೇ ಜನಾಂಗದಲ್ಲಿ ಹುಟ್ಟಿದವರು.

ಮಹಾನ್ ಸಾಮರ್ಥ್ಯ, ಪ್ರತಿಭೆ ಇದ್ದು ಈಗಿನ ಕರ್ನಾಟ
ಎಷ್ಟೋ ಮಹಿಳಾ ಕಾಂಗ್ರೆಸ್ಸಿಗರಿಗಿಂತ ಬೌದ್ಧಿಕವಾಗಿ ಮುಂದೆ
ಇದ್ದರೂ ಜಿಲ್ಲಾ ಮಟ್ಟದಲ್ಲೇ ನಾಪತ್ತೆಯಾದ ಪಿ. ಕೆ. ಸಾವಿ
ಪಂಚಾಯ್ತಿ ವ್ಯವಸ್ಥೆಯ ಆದರ್ಶ ಉದಾಹರಣೆಯಾಗಿರುವ ಊರುಬೈ
ಜಯಪ್ರಕಾಶ್, ಹೈಕೋರ್ಟಿನ ಪ್ರಮುಖ ವಕೀಲರಾದ ಪೊನ್ನ
ಪೊನ್ನಪ್ಪ, ಕೊಡಗು ಜಿಲ್ಲಾ ಬಿಜೆಪಿ ಅಧ್ಯಕ್ಷ ಕೆ. ಜಿ. ಬೋಪಯ
ಜಿಲ್ಲಾ ಪಂಚಾಯತ್‌ನಲ್ಲಿ ಗಮನ ಸೆಳೆದಿರುವ ಎಸ್. ಜಿ. ಮೇದ
ಮಾಜಿ ಸಚಿವ ದಂಬೆಕೋಡಿ ಚಿಣ್ಣಪ್ಪ ಕೂಡಾ ಅರೆಭಾಷೆ ಗೌಡ
ಹೊಸ ತಲೆ ಮಾರಿನ ಪ್ರಜ್ಞಾವಂತ ಯುವ ನಾಯಕ ಪಿ. ಎ
ಭರತ್‌ಕುಮಾರ್ ಕೂಡಾ ಅರೆಭಾಷೆಗೌಡರೇ.

ಕರ್ನಾಟಕ ಸರ್ಕಾರದ ಸಂಶೋಧನಾ ಇಲಾಖೆಯ
ಮುಖ್ಯಸ್ಥರಾಗಿ ನಿವೃತ್ತರಾದ ಸಿರಕಜೆ ಭರತ್, ಕೆ.ಎಸ್.ಎಫ್.ಸಿ.ಯ
ಜನರಲ್ ಮ್ಯಾನೇಜರ್ ಆಗಿರುವ ಆನಂದ್, "ಇಂಡಿಯಾ ಟುಡ
ಇಂಗ್ಲಿಷ್ ವಾರಪತ್ರಿಕೆಯಲ್ಲಿ ಡೆಪ್ಯುಟಿ ಎಡಿಟರ್ ಬಡ್ಡನ ರಾ
ಚಂಗಪ್ಪ, ಜನತಾದಳ ಅವಕಾಶವಾದಿ ರಾಜಕಾರಣದಲ್ಲಿ ಮೂ
ಗುಂಪಾದ ಹುದೇರಿ ರಾಜೇಂದ್ರ ಕೂಡಾ ಅರೆಭಾಷೆ ಗೌಡರೇ.

1977ರಲ್ಲಿ ರಾಜಕೀಯವಾಗಿ ಅಘೋಷಿತ ಬಂಡಾ
ಸಾರಿದ ಅರೆಭಾಷೆ ಗೌಡರ ಪ್ರಯತ್ನದಿಂಗಾಗಿ ಈಗ ಕೊಡಗಿನ ಗ್ರಾ
ತಾಲ್ಲೂಕು ಮಟ್ಟದಲ್ಲಿ, ಸಹಕಾರಿ ಸಂಘಗಳಲ್ಲಿ, ಅದೆಷ್ಟೋ
ಅರೆಭಾಷೆಗೌಡರು ಮಿಂಚುತ್ತಿದ್ದಾರೆ. ಮೈಸೂರಿನಿಂದ ಪಟ್ಟ
ಪ್ರಭಾಕರ ಅವರ ಸಂಪಾದಕತ್ವದಲ್ಲಿ 'ಕೊಡಗು ಸಂಗಾತಿ' ಎಂ
ಅರೆಭಾಷೆ ಪತ್ರಿಕೆಯೂ ಪ್ರಕಟವಾಗುತ್ತಿದೆ.

**ದಂಬೆಕೋಡಿ ಚಿಣ್ಣಪ್ಪ**

ಕೊಡಗಿನಲ್ಲಿ ಕಾಂಗ್ರೆಸ್‌ನ ಸಮರ್ಥ ನಾಯಕನಾಗಿ
ಹೊದ್ದೆಟ್ಟಿ ವೆಂಕಪ್ಪ ಅವರ ಕೊಲೆಯಾದ ನಂತರ ಅರೆಭಾಷೆಗೌಡ



ರ್ಥ ನಾಯಕನಿಗಾಗಿ ಹುಡುಕಾಟ ನಡೆಸತೊಡಗಿದರು. ಆಗ ಬೆಕೋಡಿ ಚಿಣ್ಣಪ್ಪ ಕಣ್ಣಿಗೆ ಬಿದ್ದರು. ಸಂಸ್ಥಾ ಕಾಂಗ್ರೆಸ್‌ನಿಂದಾಗಿ ತಾ ಪಕ್ಷದಲ್ಲಿದ್ದ ಚಿಣ್ಣಪ್ಪ ಅವಕಾಶ ವಂಚಿತರಾಗಿ ಕಾಂಗ್ರೆಸ್ ) ಮಡಿಕೇರಿ ಶಾಸಕರಾಗಿ ಮೊಯ್ಲಿ ಸರ್ಕಾರದಲ್ಲಿ ಮಂತ್ರಿಯೂ ರು. ಚಿಣ್ಣಪ್ಪ ಕರ್ನಾಟಕಕ್ಕೆ ಹೋಗಲಿ, ತನ್ನ ಅರೆಭಾಷೆ ಜನಾಂಗದ ಬಂಧುಗಳಿಗೂ ನೆರವಾಗದೆ ಅಸಹಾಯಕ ಪರಿಸ್ಥಿತಿಯಲ್ಲಿ ದರು. ಇದರ ಫಲವಾಗಿ 1994ರ ವಿಧಾನಸಭಾ ಚುನಾವಣೆಯಲ್ಲಿ ಣ್ಣಪ್ಪ ಚಿಂತಾಜನಕ ಸೋಲನುಭವಿಸಿದರು.

**ದಂಬೆಕೋಡಿ ಮಾದಪ್ಪ**

ಇದರ ಲಾಭ ಪಡೆದವರು ಚಿಣ್ಣಪ್ಪನವರ ಮನೆಯವರೇ ಆದ ಬೆಕೋಡಿ ಮಾದಪ್ಪ. 1977ರ ವಿಧಾನಸಭಾ ಚುನಾವಣೆಯಲ್ಲಿ ಲ್ಲ ಪಕ್ಷಗಳಿಂದಲೂ ಅರೆಭಾಷೆಗೌಡರು ಕೇವಲ ಡಮ್ಮಿ ಅಭ್ಯರ್ಥಿ ಾಗಿ ನಾಮಪತ್ರ ಸಲ್ಲಿಸುವ ಅವಕಾಶ ಪಡೆದುಕೊಂಡಿದ್ದರಿಂದ ದೆದ್ದ ಅರೆಭಾಷೆಗೌಡರ ಯುವಕರು ಮಾದಪ್ಪನವರಲ್ಲಿ ಹೊಸ ಯಕನನ್ನು ಕಂಡರು.

ಇಂಜಿನಿಯರಿಂಗ್ ಪದವೀಧರರಾದ ಮಾದಪ್ಪ ಆರಂಭದಲ್ಲಿ ತಾನ್ ಸರ್ಕಾರದಲ್ಲಿ ಉನ್ನತ ಹುದ್ದೆಯೊಂದರಲ್ಲಿದ್ದರು. ಆದರೆ ವೇ ತಿಂಗಳಲ್ಲಿ ಕೊಡಗಿಗೆ ವಾಪಸಾಗಿ 'ವೈಲ್ಡ್ ಕ್ಯಾಟ್ಸ್' ಎಂಬ ಯುವಕ ಘ ಆರಂಭಿಸಿ ಚೆಸ್, ಜೇನು ಸಾಕಣೆಯಲ್ಲಿ ತೊಡಗಿಸಿ ಕೊಂಡರು.

ರಾಜಕೀಯವಾಗಿ ಸಕ್ರಿಯರಾದ ಮಾದಪ್ಪ ಅವರ ಬಗ್ಗೆ ಹಾನ್ ಕುಡುಕ, ಹೂಗಳೆಂದರೆ ಎಲ್ಲವನ್ನು ಮರೆಯುತ್ತಾರೆ. ನ್ನುವ ಆರೋಪವೂ ಇತ್ತು. ಒಂದು ಕಾಲದಲ್ಲಿ ಮಡಿಕೇರಿಯ ಚಿಕ್ಕಪೇಟೆಯಲ್ಲಿ ಮುಸ್ಲಿಂ ಹುಡುಗರೊಂದಿಗೆ ಹೆಗಲ ಮೇಲೆ ಕೈಹಾಕಿಕೊಂಡು ಓಡಾಡುತ್ತಿದ್ದ ಮಾದಪ್ಪ, ಬಿಜೆಪಿ ಸೇರಿ ಅಚ್ಚರಿ ಮೂಡಿಸಿದ್ದರು. 1985ರಲ್ಲಿ ಮಡಿಕೇರಿ ದಸರಾ ದಿನವೇ "ಗೋಹತ್ಯೆ ವಿರೋಧಿ ಮೆರವಣಿಗೆ" ನಡೆಸಿ ಮುಸ್ಲಿಮರು ಹೆದರುವಂತೆ ಮಾಡಿದ್ದರು. ಆದರೆ ಶಾಸಕನಾದ ನಂತರ ಮಂತ್ರಿ ನಾಣಯ್ಯನವರ ಅಡ್ಡಿ, ಆತಂಕಗಳ ನಡುವೆಯೂ ಯಾರಿಗೂ ಕೇಡು ಬಗೆಯದೆ ಕೆಲಸ ಮಾಡಿದ ಖ್ಯಾತಿಯನ್ನೂ ಪಡೆದರು.

1994ರ ವಿಧಾನಸಭಾ ಚುನಾವಣೆಗೆ ಮುನ್ನ ಘನತೆ, ಗೌರವಗಳಿಂದ ದೂರ ಇದ್ದ ಕೇವಲ ಪಡ್ಡೆ ಹುಡುಗರ ನಾಯಕನಾಗಿದ್ದ ಮಾದಪ್ಪ, ಈಗ ಸಾಕಷ್ಟು ಬದಲಾಗಿದ್ದಾರೆ. ಅರೆಭಾಷೆಗೌಡರ ಅರ್ಹ ಪ್ರತಿನಿಧಿಯಾಗುವ ಹಾದಿಯಲ್ಲಿ ಮಾದಪ್ಪ ಹೆಜ್ಜೆ ಹಾಕಿದ್ದಾರೆ.

ಕೊಡಗಿನಲ್ಲಿ ಕೊಡವರಷ್ಟೇ ಹಕ್ಕಿರುವ ಅರೆಭಾಷೆಗೌಡರಿಗೂ ಕೊಡವರಿಗೂ ಅಘೋಷಿತ ಸಂಘರ್ಷ ಮುಂದುವರಿದಿದ್ದರೂ ಅಲ್ಲೊಂದು ಕಡೆ ಇಲ್ಲೊಂದು ಕಡೆ, ಆಗೊಮ್ಮೆ ಈಗೊಮ್ಮೆ ಕೊಡವ ಮತ್ತು ಅರೆಭಾಷೆಗೌಡರ ನಡುವೆ ಮದುವೆಯೂ ನಡೆಯುತ್ತದೆ. ಕೋಪ, ಪ್ರೀತಿ, ಭಯ ತಲ್ಲಣಗಳ ನಡುವೆಯೇ ಅರೆಭಾಷೆ ಗೌಡರು ಪ್ರಜ್ಞಾವಂತರಾಗಿ ಎಚ್ಚರಿಕೆಯ ಹೆಜ್ಜೆ ಇಡುತ್ತಾ ಬೆಳೆಯುತ್ತಿದ್ದಾರೆ. ಅರೆಭಾಷೆ ಗೌಡರ ಸಹನೆ ಕೊಡಗಿನ ಶಾಂತ ಜೀವನಕ್ಕೆ ಪ್ರಮುಖ ಕೊಡುಗೆ ನೀಡಿರುವುದರಲ್ಲಿ ಅನುಮಾನವೇ ಇಲ್ಲ. ಇದು ಆರೋಗ್ಯಕರ ಮನೋಸ್ಥಿತಿಯ ಲಕ್ಷಣ.

**ಕೃಪೆ : ಲಂಕೇಶ್; ಟೀಕೆ**
**ದಿನಾಂಕ : 4-8-1999**

## ಅಂಕಗಳ ಮಹತ್ವ

| | | |
|---|---|---|
| ಂದರ ಮಹತ್ವ | : | ಲೋಕಕ್ಕೆಲ್ಲ ಒಬ್ಬನೇ ದೇವರು |
| ರಡರ ಮಹತ್ವ | : | ಕಾಲಗಳೆರಡು ಹಗಲು, ರಾತ್ರಿ |
| ೂರರ ಮಹತ್ವ | : | ತ್ರಿಮೂರ್ತಿಗಳು : ಬ್ರಹ್ಮ, ವಿಷ್ಣು, ಮಹೇಶ್ವರ<br>ತ್ರಿಲೋಕಗಳು : ಸ್ವರ್ಗ, ಮರ್ತ್ಯ, ಪಾತಾಳ<br>ತ್ರಿಕರಣಗಳು : ಕಾಯ, ವಾಚ, ಮನಸ್ಸು<br>ತ್ರಿಲಿಂಗಗಳು : ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ<br>ತ್ರಿಕಾಲಗಳು : ಭೂತಕಾಲ, ವರ್ತಮಾನಕಾಲ, ಭವಿಷ್ಯತ್‌ಕಾಲ |
| ಾಲ್ಕರ ಮಹತ್ವ | : | ಚತುರ್ಯುಗಗಳು : ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗ |
| ದರ ಮಹತ್ವ | : | ಪಂಚಾಮೃತ : ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ |
| ಆರರ ಘುಹತ್ವ | : | ಅರಿಷಡ್ವರ್ಗಗಳು : ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯ |
| ಳರ ಮಹತ್ವ | : | ಸ್ವರಗಳು : ಸ, ರಿ, ಗ, ಮ, ಪ, ದ, ನಿ |
| ಂಟರ ಮಹತ್ವ | : | ಅಷ್ಟದಿಕ್ಕುಗಳು : ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಈಶಾನ್ಯ, ವಾಯುವ್ಯ, ಆಗ್ನೇಯ, ನೈರುತ್ಯ |
| ಂಬತ್ತರ ಮಹತ್ವ | : | ನವರತ್ನಗಳು : ವಜ್ರ, ಮಾಣಿಕ್ಯ, ಮರಕದ, ಪುಷ್ಯರಾಗ, ನೀಲ, ಗೋಮೇಧಿಕ, ವೈಢೂರ್ಯ, ಮತ್ತು ಹವಳ |
| ಹತ್ತರ ಮಹತ್ವ | : | ದಶಾವತಾರಗಳು : ಮತ್ಸ್ಯ, ಕೂರ್ಮ, ವಾಮನ, ವರಾಹ, ನರಸಿಂಹ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ |

**ಕೆ. ಪಿ. ಸಲಿಜ (ಕೋರಿಯಾರು ಪುಟ್ಟುಸ್ವಾಮಿ) ಕೆದಮುಳ್ಳೂರು**

## ವಿಪರ್ಯಾಸ

ಕವನ ಬರೆಯಲು
ಯೋಚಿಸಿ ಏನೂ
ಹೊಳೆಯದೆ, ಯೋಚಿಸಿ
ತಲೆ ಕೆರೆದುಕೊಂಡು
ದೀರ್ಘಕಾಲದ ಬಳಿಕ
ಹೊಳೆದದ್ದು ಕವನವಲ್ಲ
ಕೂದಲೂ ಉದುರಿ
ಬೊಕ್ಕವಾಗಿರುವ ನನ್ನ ತಲೆ

## ನಿದ್ದೆ

ನಿದ್ದೆ ಬಾರದೆ
ಒದ್ದಾಡಿದ ನನಗೆ
ಘಂಟೆ ತಿಳಯಬೇಕೆನಿಸಿ
ಎದ್ದು ನೋಡಿದರೆ
ಅದು ನಿದ್ರಿಸುತ್ತಿತ್ತು

**ಅರಂಬೂರು ರಾಧ ವೀರಪ್ಪ**
**ಮಂಡ್ಯ**

# ಪತ್ರ ವಿಭಾಗ :



## ಶುಭಹಾರೈಕೆ

ಸನ್ಮಾನ್ಯರೇ

ನಮ್ಮ ನಿಮ್ಮೆಲ್ಲರ ಈ ಪತ್ರಿಕೆಯು ಇತ್ತೀಚೆಗಂತು ಬಲು ಸುಂದರವಾದ ಕಥೆ, ಕವನ, ಫೋಟೋ ಅರೆಭಾಷಿಕ ವಿಭಾಗ ಮೊದಲಾದವುಗಳಿಂದ ಮೂಡಿಬರುತ್ತಿದೆ. ಇದುವರೆಗೂ ನಾನು ಇದನ್ನು ಓದಲು ತಪ್ಪಿಸ್ತಿಲ್ಲೆ. ಸುಂದರ ಮುದ್ರಣದೊಂದಿಗೆ ಈ ಪುಸ್ತಕವನ್ನು ಓದುವಾಗ ನನಗಂತೂ ಗೌಡ ಜನರು ಇಂತಹ ಕೆಲಸವನ್ನೆಲ್ಲ ಮಾಡಿದ್ದಾರಲ್ಲ ಹೀಗೆಯೇ ಸುಮಧುರವಾಗಿ ಮೂಡಿ ಬರಲೆಂದು ನಾನು ಜನಾಂಗದ ಪರವಾಗಿ ಹಾರೈಸುತ್ತೇನೆ.

**ತಳೂರು ಸುದ್ದಿ**
**ಮಡಿಕೇರಿ.**

ಮಾನ್ಯರೇ,

ಕೊಡಗು ಸಂಗಾತಿ ತುಂಬಾ ಲಾಯ್ಕಲಿ ಬರ್ತುಟ್ಟು ಕೊಡಗು ಸಂಗಾತಿಲಿ ಬರುವಂತ 'ಕರಿಚಿನ್ನ' ದಾರಾವಾಹಿ ತುಂಬಾ ಲಾಯ್ಕಲಿ ಬರ್ತುಟ್ಟು, ಓದಕ್ಕನ ತುಂಬಾ ಖುಷಿ ಆದೆ. 'ಕೊಡಗು ಸಂಗಾತಿ'ನ ಒಂದು ಸಲ ಓದಿಕೆ ಕುದ್ರರೆ ಅದು ಮುಗಿಯುವರೆಗೆ ಏಳಿಕೆ ಮನಸ್ಸು ಬಾಲೆ. ಹಂಗೆ 'ಕನ್ನಡ ರಾಜ್ಯೋತ್ಸವ' ಬರ್ತುಟ್ಟು ಹಂಗೆ ಕನ್ನಡ, ಕನ್ನಡಕ್ಕೆ ತುಂಬಾ ಪ್ರಾಶಸ್ತ್ಯ ಕೊಡಲಿ ನಾ ಕೇಳಿಕಣೆ. ಕನ್ನಡ ಉಳಿಸಿ ಸಂಸ್ಕೃತಿ ಬೆಳೆಸಲಿತ ಅಲ್ಲದೆ ನಮ್ಮ ಕೊಡಗಿನ ಸಂಸ್ಕೃತಿ ಆಚಾರ, ವಿಚಾರ ಇಂದು ಕಡಿಮೆಯಾಗುತ್ತ ಉಟ್ಟು. ನಮ್ಮ ಅರೆಭಾಷೆನೆ ತಕಂಡರೆ ಗೊತ್ತಾದೆ. ಇಂದು ಒಂದು ಕೂಸೂಗೆ ಅರೆಭಾಷೆ ಕಲಿಸುವ ಬದ್ಲು ಮೊದಲು ಕಲ್ಸುದು ಇಂಗ್ಲಿಷ್. ಹಂಗೆ ಮಾಡಿಕಾಗದು ನಮ್ಮ ಅರೆಭಾಷೆನ ಯಾಕೆ ಅಷ್ಟು ಕಮ್ಮೀ ಮಾಡ್ತು. ಅರೆಭಾಷೆ ಮಾತಾಡುರೆ ಅದೊಂದು ತರ ನಮ್ಮ ಪ್ರೆಸ್ಟಿಜ್‌ಗೆ ಕಡಿಮೆತ ಗ್ಯಾನ ಮಾಡ್ಚಡಿ. ನಮ್ಮ ಸಂಸ್ಕೃತಿನ ಉಳಿಸಿತ ಕೇಳಿಕಣೆ. ನಮ್ಮ ದೇಶಲಿ ನವಂಬರ್ ಬಾಕನ ಮಾತ್ರ ಕನ್ನಡ ಗ್ಯಾನ ಆದು ಕಂಡದೆ. ನವಂಬರ್ ಮುಗಿಯತನಕ ಕನ್ನಡನು ಮುಗ್ದು ಹೋದೆಕಂಡದೆ, ಇಲ್ಲದಿದ್ದರೆ ಇಸ್ಕೋತ್ತಿಗೆ ಕನ್ನಡ ಕಡ್ಡಾಯ ಆಗಿ ಹೋತಿತ್. ಈಗಿನ ಸಣ್ಣ ಮಕ್ಕಳೊಟ್ಟಿಗೆ ಕನ್ನಡ ಮಾತಾಡುವೆ. ಅವು ಸ ಮಾತಾಡ್ತು ಇಂಗ್ಲಿಷ್. ಹಿಂಗೆ ಇರ್ಕ್ಕನ ಕನ್ನಡಕ್ಕೆ ಸ್ವಲ್ಪ ಬೆಲೆ ಕೊಡಿ ಶಿಕ್ಷಣ ರಂಗಲಿ ಸ ಕನ್ನಡ ಮುಂದ್‌ವರಿಂಯಲಿ ಅಂತ ಕೇಳಿ ಕಣೆ. ಹಂಗೆನೆ ಅರೆಭಾಷೆನ ಮರೆಯದು ಸ ಬ್ಯಾಡ.

**ಹರಿಣಿ ಗೋಪಾಲ್ ಚೇತನ್**
**ಬೆಂಗಳೂರು.**

---

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯು ಗೌಡರ ಶ್ರದ್ಧಾಪೂರ್ಣ ಸೇವೆಯಲ್ಲಿ ಸದಾ ನಿರತ .

**ಪಟ್ಟಡ ಪ್ರಭಾಕರ**

## ಬದಕು (ಜೀವನ)

ಹುಟ್ಟು ಸಾವಿನ ಮಧ್ಯ ಅಳತೆಗೋಲಿಟ್ಟ ಬದಕು
ಸುಖ ದುಃಖ ಕೂಡಿದ ಗಾಜಿನ ಕನ್ನಡಿಯ ಬದಕು
ಹುಟ್ಟಿದ ನದಿ ಹರಿಯುವ ತರದೀ ಬದಕು
ಅಡೆತಡೆಗಳಿಗಂಜಿಯೂ ಅಂಜದೆಯೂ ಸಾಗುವ ಬದಕು
ಹಲವಾರು ತರಹದ ಅನುಭವದಲಿ ಹರಿಯುವ ಬದಕು
ದಡಕಾಣದ ಸಾಗರದಿ ಆಶಾಕಿರಣ ಕಾಣುವ ಬದಕು
ಕ್ಷಣಿಕ ಜೀವನದ ಅನಂತ ಆಸೆಯ ಭಾವನೆಯ ಬದಕು
ಸ್ವಾರ್ಥಕ್ಕೆ ಸ್ವಾಭಿಮಾನ, ಆನಂದ ವೈಭೋಗಕ್ಕೆ ಬಲಿಯಾದ ಬ
ಭ್ರೂಣವಾದ ಜೀವಿ ಬೆಳೆಯುತ್ತಲೇ ಬಲೆ ಹೆಣೆದ ಬದಕು
ಬೆಳಕಿನಿಂದಕತ್ತಲೆಗೂ ಕತ್ತಲೆಯಿಂದ ಬೆಳಕಿಗೂ ಇಣುಕಾಡುವ ಬದ
ದೇವರೂ ದೆವ್ವವೂ ರಾಕ್ಷಸ ಕಟುಕನಾದ ಈ ಬದಕು
ಜೀವಾತ್ಮದ ನೋವನ್ನರಿಯದ ಅಮಾನುಷ ಬದಕು
ಸಾವಿರ ಚೇತನ ಕಳೆದಿದೆ ಈ ಬಗೆ ಬಗೆಯ ಬದಕು
ಪುನಃ ಪುನಃ ರವಿ ಮೂಡುವ ಮೊದಲು ನವ ಜನ್ಮ ತಳೆಯುವ ಬದ
ಹಡೆದವರಿಗೆ ಪಡೆದವರಿಗೆ ಕೂಡಿದವರಿಗೆ ಋಣ ತೀರಿಸುವ ಬ
ಮೃತ್ಯುವೆಂಬ ಅತಿಥಿಗೆ ಕೃತಕೃತ್ಯನಾಗಿರಬೇಕಾದ ಬದಕು
ನೀರ ಮೇಲಿನ ಗುಳ್ಳೆ ನಮ್ಮದು ನಾಟಕ ರಂಗದ ಬದಕು
ಹೇಳದೇ ಆರುವ ಈ ಜ್ಯೋತಿ.ನೆನಪು ಮಾತ್ರ ಬಿಟ್ರೇಷರ ಬದಕು
ನಾ ಹೇಳುವೆ ಹೇಗಿರಬೇಕೆಂಬ ಆರೋಗ್ಯದ ಬದಕು
ಲೋಕ ಪರಲೋಕೋಪಯುಕ್ತ ಪರ ಕೆಡುಕೆನ್ನಿಸದ ಬದಕು

**ಶಂಕರನ ಬ**
**ಮೈಸೂರು -**

---

## ನಿಮ್ಮಲ್ಲಿ ನಾಯಕತ್ವದ ಗುಣಗಳಿವೆಯೇ?

ನಿಮ್ಮಲ್ಲಿರುವ ನಾಯಕತ್ವ ಗುಣವನ್ನು ಗುರುತಿಸಿಕೊಳ್ಳಲು ಕೆ ಉಪಯುಕ್ತ ಅವಶ್ಯಕ ಸೂಚನೆಗಳು

೧. ಸಂಪರ್ಕ ಚಾತುರ್ಯತೆ
೨. ಇತರರು ಹೇಳುವುದನ್ನು ಆಲಿಸುವುದು
೩. ಇತರರ ಬಗ್ಗೆ ವಿಶ್ವಸನೀಯ ಆಸಕ್ತಿ
೪. ವಿಶೇಷ ಚಾಲನಾ ಶಕ್ತಿ
೫. ಮುಂದಿನ ಗುರಿಗಾಗಿ ಸಮರ್ಥ ತಂಡ ಕಟ್ಟುವುದು
೬. ಇತರರ ದೃಷ್ಟಿಕೋನದಿಂದ ವಸ್ತು ವಿಮರ್ಶೆ
೭. ಪರಸ್ಪರರ ಅಭಿಪ್ರಾಯ ಗೌರವಿಸುವುದು
೮. ತಪ್ಪು, ದೂರು ಮತ್ತು ಟೀಕೆಗಳ ಸಮರ್ಥ ನಿರ್ವಹಣೆ
೯. ಸರಿಯಾದ ಗುರಿಗಳ ನಿಗದಿ
೧೦. ಏಕಾಗ್ರತೆ ಮತ್ತು ಶಿಸ್ತು
೧೧. ಎಲ್ಲದರಲ್ಲಿ ಸಮತೋಲನವನ್ನು ಸಾಧಿಸುವುದು
೧೨. ಸಕಾರಾತ್ಮಕ ಮಾನಸಿಕ ಮನೋಭಾವವನ್ನು ಸೃಷ್ಟಿಸುವುದು
೧೩. ಚಿಂತೆ, ಕಳವಳ ಪಡದಿರುವುದು
೧೪. ಇತರರಲ್ಲಿ ಹುಮ್ಮಸ್ಸನ್ನುಂಟು ಮಾಡುವ ಶಕ್ತಿ. ಈ ಮೇಲ್ಕ ಗುಣಗಳು ನಿಮ್ಮಲ್ಲಿರದಿದ್ದರೆ ಚಿಂತಿಸಬೇಡಿ. ಇವುಗಳನ್ನು ರೂಢಿಸಿಕೊಂ ನಿಮ್ಮಲ್ಲಿರುವ ನಾಯಕನನ್ನು ಬೆಳೆಸಿ.

# ಸೆ : ಯಾರು? ಎಲ್ಲಿಂದ?

ರೆವರೆಂಡ್ ಕಿಟಲ್‌ರವರು ವಲಸೆ ಎಂಬ ಕನ್ನಡ ಪದಕ್ಕೆ ್ಲೀಷ್‌ನಲ್ಲಿ Emigration ಎಂದು ಅರ್ಥ ಕೊಟ್ಟಿದ್ದಾರೆ.

ವಲಸೆ ಯಾ Emigration ಪದಗಳ ಅರ್ಥ ಮನುಷ್ಯ ಒಂದು ಂದ ಇನ್ನೊಂದು ಸ್ಥಳ ಅಥವಾ ದೇಶಕ್ಕೆ ತಾನಿದ್ದ ಸ್ಥಳ ಯಾ ವನ್ನು ಬಿಟ್ಟು ಬೇರೆ ಸ್ಥಳ ಯಾ ದೇಶಕ್ಕೆ ಹೋಗಿ ಖಾಯಂ ಆಗಿ ುವುದೆಂದರ್ಥ. ಮನುಷ್ಯ ಪ್ರಾಣಿ ಪಕ್ಷಿಗಳು ಗಿಡ, ಮರ ಕಲ್ಲಿನಂತೆ ು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುವುದಿಲ್ಲ. ಆದ್ದರಿಂದ ಮನುಷ್ಯ, ಪ್ರಾಣಿ, ಪಕ್ಷಿಗಳ ಸಹಜವಾದ ಚಟುವಟಿಕೆ.

ಭೂಮಿಯಲ್ಲಿ ಮಾನವ ಜನ್ಮ ಪ್ರಾರಂಭವಾದ ದಿನದಿಂದ ನವರೆಗೆ ತನ್ನ ಆಹಾರಕ್ಕಾಗಿ, ಸೌಕರ್ಯಗಳನ್ನು ಒದಗಿಸಿ ್ಳುವುದಕ್ಕಾಗಿ ಸ್ಥಳದಿಂದ ಸ್ಥಳಕ್ಕೆ ದೇಶದಿಂದ ದೇಶಕ್ಕೆ ವಲಸೆ ಗುವುದನ್ನು ನಾವು ಕಾಣುತ್ತಿದ್ದೇವೆ. ಪ್ರಪಂಚದ ಯಾವುದೇ ು ಪಂಗಡ ವಲಸೆ ಹೋಗದೆ ತಾನು ಇದ್ದ ಸ್ಥಳದಲ್ಲಿಯೇ ಸಾರು ವರ್ಷಗಳಿಂದ ಒಂದೇ ಸ್ಥಳದಲ್ಲಿಯೇ ನೆಲೆ ನಿಂತಿದ್ದಾರೆ ು ಹೇಳಲು ಸಾಧ್ಯವೇ ಇಲ್ಲ. ಆದಿಮಾನವನು ತನ್ನ ಆಹಾರಕ್ಕಾಗಿ ುಲ್ಲಿ ಸಿಕ್ಕುತ್ತಿದ್ದ ಹಣ್ಣು ಹಂಪಲು ಗೆಡ್ಡೆ ಗೆಣಸುಗಳಿಗಾಗಿ ಂದ ಕಾಡಿಗೆ ಅಲೆಯುತ್ತಿದ್ದ. ದಿನ ಕಳೆದಂತೆ ಆಹಾರಕ್ಕಾಗಿ ಾಡುವುದನ್ನು ಬಿಟ್ಟು ಸ್ವಲ್ಪ ಸಮಯದವರೆಗೆ ತಾನು ನೆಲೆ ನಿಂತ ನ್ನು ಕಡಿದು ಬಯಲು ಮಾಡಿ ತಾನೇ ಆಹಾರ ಬೆಳೆಸುವ ತ್ತಿಯನ್ನು ಕಲಿತುಕೊಂಡ ಮೇಲೂ ಭೂಮಿಯ ಸಾರ ಕುಂದಿದ ರ ಅಲ್ಲಿಂದ ಬಿಟ್ಟು ಬೇರೆಡೆ ಹೋಗಿ ನೆಲೆಸಿ ಅಲ್ಲಿದ್ದ ಕಾಡನ್ನು ಿ ವ್ಯವಸಾಯ ಮಾಡುತ್ತಿದ್ದ. ಹಣ್ಣು ಹಂಪಲು ಬೆಳೆದ ಬೆಳೆ ಗದಿದ್ದಾಗ ಪ್ರಾಣಿಗಳನ್ನು ಬೇಟೆಯಾಡಿ ತನ್ನ ಆಹಾರವನ್ನು ಮುತ್ತಿದ್ದ. ಹಾಗಿದ್ದರೂ ಪ್ರಾಕೃತಿಕ ವೈಪರೀತ್ಯಗಳಾದ ಮಳೆ ಗಳ ನೆರೆ ಹಾವಳಿಗಳಿಂದ ಹಾಗೂ ಒಂದು ಬಲಾಢ್ಯ ಿನವರಿಂದ ಇನ್ನೊಂದು ಬಲಹೀನ ಗುಂಪಿನ ಮೇಲೆ ಆಕ್ರಮಣ ಾಗಿಯೂ ಸಹ ಒಂದೂರಿನಿಂದ ಇನ್ನೊಂದು ಊರಿಗೆ ವಲಸೆ ಗುವ ಕಾರಣಗಳಿವೆ. ಭಾರತದಲ್ಲೇ ಅಲ್ಲ ಇಡೀ ಪ್ರಪಂಚದ ಲ್ಲಾ ಒಂದಲ್ಲ ಒಂದು ಕಾಲದಲ್ಲಿ ವಲಸೆಗಾರರೇ. ಕಾಡಿನಲ್ಲಿರುವ ು ನಿವಾಸಿಗಳಿಂದ ಹಿಡಿದು ಅತಿ ಉನ್ನತ ನಾಗರೀಕತೆಯನ್ನು ಂದಿರುವ ಜನರೆಲ್ಲಾ ಒಂದಲ್ಲ ಒಂದು ಕಾಲದಲ್ಲಿ ವಲಸೆ ಗಿದ್ದಾರೆ. ಯಾವುದೇ ಒಂದು ದೇಶದ ಜನತೆಯ ಪೂರ್ವ ತ್ರೆಯನ್ನು ತೆಗೆದುಕೊಂಡರೆ ಆ ಜನಾಂಗದ ಪೂರ್ವಜರೆಲ್ಲರೂ ಸೆ ಬಂದವರಾಗಿದ್ದಾರೆ. ಉದಾಹರಣೆಗೆ ಭರತ ಖಂಡದಲ್ಲಿ ಸಿರುವ ಕಾಡು ಜನರಿಂದ ಹಿಡಿದು ಮುಂಡಾ, ಗೊಂಡರು, ಿಡರು, ಆರ್ಯರು, ಹೂಣರು, ಅರಬ್ಬರು, ಇಥಿಯೋಫಿಯನ್ನರು, ಯೂನರು, ಮಂಗೋಲಿಯನ್ನರು ಮುಂತಾದ ಜನಾಂಗದವರು ನಲ್ಲ ಒಂದು ಪ್ರದೇಶದಿಂದ ವಲಸೆ ಬಂದವರೇ. ಕೆಲವರು ಏಳು ು ಸಾವಿರ ವರ್ಷಗಳ ಹಿಂದೆ ಭಾರತಕ್ಕೆ ವಲಸೆ ಬಂದಿರಬಹುದು. ಇನ್ನೂ ಕೆಲವು ಪಂಗಡದವರು ಮೂರು ನಾಲ್ಕು ಸಾವಿರ ವರ್ಷಗಳ ಹಿಂದೆ ವಲಸೆ ಬಂದಿರಬಹುದು. ಇನ್ನು ಕೆಲವರು ನೂರು ಇನ್ನೂರು ವರ್ಷಗಳಿಂದೀಚೆ ವಲಸೆ ಬಂದಿರಬಹುದು. ಅದೇ ರೀತಿ ಭಾರತದಿಂದಲೂ ಶ್ರೀಲಂಕಾ, ಮಾಲ್ಡಿವ್ಸ್, ಸುಮಾತ್ರ ಜಾವಾ, ಬೋರ್ನಿಯಾ, ಮಲೇಷ್ಯಾ, ಇಂಡೋನೇಷ್ಯಾ, ಆಫ್ರಿಕಾ, ದೇಶಗಳಿಗೆ ಕ್ರಿ. ಶ. ಹತ್ತನೇ ಶತಮಾನದವರೆಗೆ ಹೋಗಿ ಅಲ್ಲಿನ ಪ್ರಜೆಗಳಾಗಿ ಬಾಳಿ ಬದುಕುತ್ತಿದ್ದಾರೆ. ಈಗಲೂ ಸಹ ಭಾರತದಿಂದ ವಿದ್ಯಾವಂತ ಯುವಕ ಯುವತಿಯರು ಅಮೇರಿಕಾ, ಆಸ್ಟ್ರೇಲಿಯಾ ಕೊಲ್ಲಿ ದೇಶಗಳಲ್ಲಿ, ಇಂಗ್ಲೇಂಡ್, ಯುರೋಪ್ ದೇಶಗಳಿಗೆ ವಲಸೆ ಹೋಗಿ, ಅಲ್ಲಿನ ಪ್ರಜೆಗಳಾಗಿ ಜೀವಿಸುತ್ತಿದ್ದಾರೆ.

ಅದೇ ರೀತಿ ಕರ್ನಾಟಕದಲ್ಲಿ ನೆಲೆಸಿರುವ ಜನರೂ ಸಹ ಬಂಗಾಳ, ಗುಜರಾತ್, ಕಾರವಾರ, ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು, ಕೇರಳದಿಂದ ವಲಸೆ ಬಂದಿದ್ದಾರೆ. ಅದೇ ರೀತಿ ಕೊಡಗಿನವರೂ ಸಹ ಜಿಲ್ಲೆ ಬಿಟ್ಟು ಕೊಡಗಿನಿಂದ ಹೊರಗಿನ ಜಿಲ್ಲೆಗಳಾದ ಮೈಸೂರು, ಹಾಸನ, ಚಿಕ್ಕ ಮಗಳೂರು, ಬೆಂಗಳೂರು, ಚೆನ್ನೈ, ಮುಂಬೈ, ದೆಹಲಿ ಮಂತಾದ ಸ್ಥಳಗಳಲ್ಲದೆ ಪರದೇಶಗಳಾದ ಇಂಗ್ಲೇಂಡ್, ಅಮೇರಿಕಾ, ಜರ್ಮನಿ ಮುಂತಾದ ಕಡೆಗಳಲ್ಲಿ ಹೋಗಿ ನೆಲೆಸಿ ಅಲ್ಲಿನ ನಾಗರೀಕ ಹಕ್ಕನ್ನು ಪಡೆದಿದ್ದಾರೆ.

ಆದುದರಿಂದ ಯಾರು ವಲಸೆಗಾರರು ಯಾರು ವಲಸೆಗಾರರಲ್ಲ ವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಅದಕ್ಕಾಗಿ ನಮ್ಮ ತಲೆಯನ್ನು ಕೆಡಿಸಿಕೊಳ್ಳುವ ಅವಶ್ಯಕತೆ ಇಲ್ಲ. ಯಾರಾದರೂ ನೀನು ವಲಸೆ ಬಂದವನು ಎಂದು ಹೇಳಿದರೆ ಆ ರೀತಿ ಹೇಳುವವನೂ ಸಹ ವಲಸೆ ಬಂದವರಲ್ಲಿ ಒಬ್ಬನಾಗಿ ಸೇರಿರುತ್ತಾನೆ. ಭರತ ದೇಶದೊಳಗಿನಿಂದ ಅತ್ತ ಇತ್ತ ಹೋದವರಾರು ವಲಸೆಗಾರರಲ್ಲವೆಂಬ ಅರಿವಿರಲಿ. ಇದರ ಅರಿವಿರದವರು ಮೂರ್ಖರೇ ಸರಿ.

ಲೇಖಕರು : ಪ್ರೊ. ಪೂಜಾರಿ ಮೊಣ್ಣಪ್ಪ

---

## ನಗೆಹನಿ

ರಾಮು : ನನ್ನ ಪಪ್ಪ ನೀರಿನಲ್ಲಿ ಮೂರು ಗಂಟೆಗಳ ಕಾಲ ಮುಳುಗಿ ಕಂಡಿದ್ದವೆ.

ಶ್ಯಾಮು : ನನ್ನ ಪಪ್ಪ ಬೇಕಾರೆ ಇಡೀ ದಿನ ನೀರನಲ್ಲಿ ಮುಳಗಿ ಕಂಡ್ಡಿದ್ದದೆ.

ಸೋಮು : ನಿಮ್ಮ ಪಪ್ಪ ಎಲ್ಲ ಎಂಥ ಮಾರಯರೇ, ನನ್ನ ಪಪ್ಪ ನೀರಲ್ಲಿ ಮುಳುಗಿ ಎರಡು ವರ್ಷ ಆತು ಇನ್ನು ಮೇಲೆ ಬಾತೇಲೆ.

* * * * *

ಚೋಮುಣಿ : ನಿನ್ನ ಅಪ್ಪ ಯಾವ ಕೆಲಸದಲ್ಲಿ ಇರ್‌ದುರಾ

ಪುಟ್ಟಾ : ನನ್ನ ಅಪ್ಪ ಡಿ. ಸಿ. ಆಗಿಯೊಳೊ

ಚೋಮುಣಿ : ಅಂದರೆ, ನಿನ್ನ ಅರ್ಥ ಡೆಪ್ಯೂಟಿ ಕಮೀಷ್ನರ?

ಪುಟ್ಟಾ : ಅಲ್ಲರಾ ಡಿ. ಸಿ. ತೇಳ್‌ರೆ ಅರ್ಥ ಡ್ರೈನೇಜ್ ಕ್ಲೀನರ್‌ತ

ಗುಡ್ಡೆ ಮನೆ ವನಮಾಲ, ಮೈಸೂರು



# ಅಪೂರ್ವವಾದ ಸಾರ್ಥಕ ಸಂಶೋಧನೆ

**ಅಮರ ಸುಳ್ಯದ ಸ್ವಾತಂತ್ರ್ಯ ಸಮರ :**
**ಲೇಖಕ : ಎನ್. ಎಸ್. ದೇವಿಪ್ರಸಾದ್, ಸಂಪಾಜೆ**

ಅನೇಕ ಬಾರಿ ನಾವು ಇತಿಹಾಸವೆಂದು ನಂಬಿರುವಂತದ್ದು ವಾಸ್ತವದಲ್ಲಿ ಇತಿಹಾಸವೇ ಆಗಿರುವುದಿಲ್ಲ. ಅದು ಹಲವರ ಕೈವಾಡ ದಿಂದಾಗಿ, ಹಲವರ ಹಿತಾಸಕ್ತಿಗಳಿಗನುಗುಣವಾಗಿ ಪೂರ್ತಿಯಾಗಿ ಬೇರೆಯೇ ಆಗಿರುವುದುಂಟು. ಭಾರತದ ಇತಿಹಾಸವಂತೂ ನಾನಾ ಕಾರಣಗಳಿಗಾಗಿ ಅಸಂಬದ್ಧವಾಗಿ ಹೋಗಿದೆ. ಸುಳ್ಳಿಗೆ ಶರಣಾಗಿ ಬಿಟ್ಟಿದೆ! ಹೀಗಿರುವಾಗ ಸತ್ಯದ ಅನ್ವೇಷಣೆ ಕಷ್ಟಕರವಾದ ಕೆಲಸವೇ. ಆದರೂ ಆ ಕೆಲಸವಾಗಬೇಕು. ಕೊನೆಗೂ ಸತ್ಯದ ಅನಾವರಣ ವಾಗಬೇಕು. ಪ್ರಕೃತ ಕೃತಿಯ ಉದ್ದೇಶವೂ ಇದೇ ಆಗಿದೆ.

1857ರಲ್ಲಿ ಸಿಪಾಯಿ ದಂಗೆಯೇ ಭಾರತದ ಮೊದಲ ಸ್ವಾತಂತ್ರ್ಯ ಹೋರಾಟವೆಂಬುದು ಇತಿಹಾಸದಲ್ಲಾದ ಅಪಚಾರ. ದಿಟದಲ್ಲಿ ಇದಕ್ಕೂ ಎರಡು ದಶಕಗಳ ಹಿಂದೆಯೇ, 1837ರಲ್ಲೇ, ಅಮರ ಸುಳ್ಯವನ್ನು ಕೇಂದ್ರವಾಗಿಟ್ಟುಕೊಂಡು ಸ್ವಾತಂತ್ರ್ಯಕ್ಕಾಗಿ ಪ್ರಬಲವಾದ ಸಮರವೊಂದು ನಡೆದಿತ್ತು ಮತ್ತು ಅದು ಒಂದು ಮಿತಿಯಲ್ಲಿ ಯಶಸ್ವಿಯೂ ಆಗಿತ್ತು ಎಂಬುದು ಪ್ರಚಾರದಿಂದ ವಂಚಿತವಾದ ಮಹಾನ್ ಸತ್ಯ. ಅಮರ ಸುಳ್ಯ ಸಂಗ್ರಾಮಕ್ಕೆ ಸೇರಿದ ಹೋರಾಟಗಾರರು ಸರ್ವಸಿದ್ಧತೆಯೊಂದಿಗೆ 1837ರ ಮಾರ್ಚ್ 30ರಂದು ಹೊರಟು ಏಪ್ರಿಲ್ 5ರಂದು ಮಂಗಳೂರು ತಲುಪಿ, ಅಲ್ಲಿನ ಬ್ರಿಟಿಷ್ ಸರಕಾರವನ್ನು ಸ್ವಾಧೀನ ತೆಗೆದುಕೊಂಡು ಅಲ್ಲಿ ಒಟ್ಟು 13 ದಿನಗಳ ತನಕ ರಾಜ್ಯಭಾರ ನಿಭಾಯಿಸಿದ್ದು ಒಂದು ರೋಮಾಂಚಕಾರಿ ಬಂಡಾಯ ಸಾಫಲ್ಯ. ಅನಂತರದಲ್ಲಿ ದೇಶೀಯರ ಸಹಕಾರದಿಂದಲೇ ಇಂಗ್ಲೀಷರು ಅಧಿಕಾರ ಮರಳಿ ಪಡೆದದ್ದು ಘೋರ ದುರಂತ, ಒಂದು ಘನವಾದ ಉದ್ದೇಶದಿಂದ, ಕಠಿಣ ಪರಿಶ್ರಮದಿಂದ, ತರ್ಕಬದ್ಧತೆಯಿಂದ ರೂಪುಗೊಂಡ ಕ್ರಾಂತಿಯೊಂದನ್ನು ಬ್ರಿಟಿಷರು, ಬೆಂಬಲಿಗ ದೇಶದ್ರೋಹಿಗಳು ಕೇವಲ ಗೌಡ ದಂಗೆ; ಕಲ್ಯಾಣಪ್ಪನ ಕಾಟಕಾಯಿ (ದರೋಡೆ) ಎಂದಿತ್ಯಾದಿ ಹಂಗಿಸಿದ್ದೂ ಉದ್ದೇಶ ಪೂರ್ವಕವೇ. ಸ್ವಾತಂತ್ರ್ಯಾ ನಂತರವೂ ಇಂಥದೊಂದು ಸಮರವನ್ನು ಸರಕಾರವಾಗಲೀ, ಚರಿತ್ರಕಾರರಾಗಲೀ ಗಂಭೀರವಾಗಿ ತೆಗೆದುಕೊಳ್ಳದ್ದು ವಿಷಾದದ ಸಂಗತಿ. ಅಪರೂಪಕ್ಕೆ ದಂಗೆಯ ಪ್ರಾಮುಖ್ಯವನ್ನು ಮನದಟ್ಟು ಮಾಡಿಸುವ ಪ್ರಯತ್ನ ನಡೆದಿದ್ದರೂ ಅದು ಸಾಕಷ್ಟು ಪರಿಣಾಮಕಾರಿಯಾಗಿ ಆಗಿಲ್ಲ ಎಂಬುದು ಹಲವರ ವ್ಯಥೆ. ಹಾಗೆ ಆತಂಕಿಸಿದ ಹಿರಿಯರಲ್ಲಿ ಗ್ರಂಥಕರ್ತ ಎನ್. ಎಸ್. ದೇವಿಪ್ರಸಾದ್ ಸಂಪಾಜೆ ಅವರೂ ಮುಖ್ಯರು.

ಅವರು ತಮ್ಮ 'ಅಮರ ಸುಳ್ಯ ಸ್ವಾತಂತ್ರ್ಯ ಸಂಗ್ರಾಮ' ಹೊತ್ತಗೆಯಲ್ಲಿ ಸಂಗ್ರಾಮದ ಕುರಿತಂತೆ ಬಹಳಷ್ಟು ಅಧಿಕೃತವಾದ ಮಾಹಿತಿಗಳನ್ನು ಒದಗಿಸಿದ್ದಾರೆ. ಜೊತೆಗೆ ಚರ್ಚಿಸಿದ್ದಾರೆ; ತೀರ್ಮಾನಿಸಿದ್ದಾರೆ. ಭಾಗ ಒಂದರಲ್ಲಿ ಕ್ರಾಂತಿಯ ಹಿನ್ನೆಲೆ ಮತ್ತು ಪರಿಣಾಮಗಳನ್ನು ಸುದೀರ್ಘವಾಗಿ, ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಇಲ್ಲಿ ಅಳವಡಿಸಿಕೊಂಡಿರುವ ಪ್ರಿನ್ಸಿಪಲ್ ಕಲೆಕ್ಟರ್ ಲೆ ಸವಿಸ್ತಾರಾದ ವರದಿ ಸಂಗ್ರಾಮವನ್ನು ಹೆಚ್ಚು ನಿಖರ ಅಳೆದುಕೊಳ್ಳಲು ನೆರವಾಗುತ್ತದೆ. ಅನುಬಂಧದಲ್ಲಿನ ಕೊಡಗು ಕ ಕೆನರಾ ಬಂಡಾಯದ ಕುರಿತ ಟಿಪ್ಪಣಿ, ಕೆನರಾ ಬಂಡಾಯ ವಿಚಾರಣೆಯ ನ್ಯಾಯಾಂಗ ಸೂಚಿ ಇವು ಉಪಯುಕ್ತವಾ ಅನುಬಂಧ ನಾಲ್ಕರಲ್ಲಿನ, ಐಗೂರು ಇತಿಹಾಸಕ್ಕೆ ಸೇರಿದ, ಬ್ರಿಟಿ ಬಲಿಯಾದ ಸ್ವಾತಂತ್ರ್ಯ ಹೋರಾಟಗಾರ ಐಗೂರು ವೆಂಕ ನಾಯಕನ ಲಾವಣಿ' ಮೈನವಿರೇಳಿಸುವಂತಿದೆ. ಇಂಥ ಸಾಹಿ ಇತಿಹಾಸವನ್ನು ಸಮರ್ಪಕವಾಗಿ ಕಂಡರಿಸುವಲ್ಲಿ ವಿಶೇಷ ಉಪಕಾರಾಗುತ್ತದೆ ಕೂಡಾ. ಭಾಗ ಎರಡರಲ್ಲಿ, ಅಮರ ಕ್ರಾಂತಿಯ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲೆಂದು ಅಜ್ಞಾತ ವೀ ನಮನ ಸಲ್ಲಿಸಲೆಂದು ಸ್ವತಃ ಗ್ರಂಥಕರ್ತರೇ ಮುಂಚೂಣಿಯಲ್ ಹಮ್ಮಿಕೊಂಡಿದ್ದ ಅಮರ ಕ್ರಾಂತಿ ಜಾಥಾದ ಕುರಿತ ಪ್ರೊ. ಎಂ. ಶಿ ನೆಲೆಮನೆ ಅವರು ಬರೆದಿರುವ ವಿವರವಾದ ವರದಿಯಿದೆ. 30-3-98ರಂದು ಸುಳ್ಯದಿಂದ ಹೊರಟು 5-4-98ರ ಮಂಗಳೂರಿನಲ್ಲಿ ಅಂತ್ಯಗೊಂಡ ಕಾಲ್ನಡಿಗೆ ಜಾಥಾದ ಹೃದಯ ಚಿತ್ರಣವಾಗಿದೆ. ಈ ದಿನಗಳಲ್ಲಿ ನಿತ್ಯವೂ ಆಡಲ್ಪಟ್ಟ ಡಾ. ಪ್ರ ಶಿಶಿಲರ 'ಅಮರ ಕ್ರಾಂತಿ' ಬೀದಿ ನಾಟಕವನ್ನೂ ಇಲ್ಲಿ ಮುದ್ರಿಸಲಾ ನಾಟಕ ವೈಶಿಷ್ಟ್ಯ ಪೂರ್ಣವಾಗಿದೆ, ಗಮನಾರ್ಹವಾಗಿದೆ.

'ಅಮರ ಸುಳ್ಯದ ಸ್ವಾತಂತ್ರ್ಯ ಸಮರ ಒಂದು ಅಪೂರ್ವ ಪ್ರಯತ್ನ, ಸಾರ್ಥಕ ಸಂಶೋಧನೆ. ಆದರೂ ಇದರ ಕುರಿತು ಲೇಖ ಅತೃಪ್ತಿಯನ್ನು ಉಳಿಸಿಕೊಂಡೇ ಇದ್ದಾರೆ......' ಒಟ್ಟಿನಲ್ಲಿ ಬ್ರಿಟಿ ದಾಖಲೆಗಳನ್ನು ಬಿಟ್ಟು ಹೋಗಿದ್ದಾರೆ. ಅವರು ಬರೆದ ಸಾಲ ಮಧ್ಯೆ ಸತ್ಯಾನ್ವೇಷಣೆ ಸಾಧ್ಯ. ಅಲ್ಲದೆ ಫ್ರೆಂಚರು, ಜರ್ಮ ಪೋರ್ಚುಗೀಸರು ಏನು ದಾಖಲಿಸಿಟ್ಟಿದ್ದಾರೆ? ಅಲ್ಲಿಯೂ ಸಂಶೊ ನಡೆಯಬೇಕು' ಎಂದೂ, ಇನ್ನೊಂದೆಡೆ, ಚೆನ್ನೈಯ ಪತ್ರಾಗಾರ ಕಾಟನನ ವರದಿ, ಅದಕ್ಕೆ ಕಬ್ಬನ್ ಬರೆದ ಟಿಪ್ಪಣಿ, ಖೈ ವಿಚಾರಣಾ ವರದಿ, ನ್ಯಾಯಾಲಯ ತೀರ್ಪುಗಳು ಅಮರಕ್ರಾಂ ಬಗ್ಗೆ ಇನ್ನಷ್ಟು ಬೆಳಕು ಬೀರಬಲ್ಲವು......' ಎಂದೂ ಹೇಳು ಅವರಲ್ಲಿನ ವಿನಯ ವಿಜೃಂಭಿಸುತ್ತದೆ. ಮತ್ತು ಅವರ ಮುಂ ಪ್ರಯತ್ನಗಳ ಬಗ್ಗೆ ಭರವಸೆ ಹೆಚ್ಚಿಸುತ್ತದೆ.

ವಿ. ಗ. ನಾ

ಕೃಪೆ : ಈ ದಿನ (ದೈ

---

ಕೊಡಗು ಸಂಗಾತಿ ಗೌಡರ ಶ್ರೇಯೋಭಿವೃದ್ಧಿಗಾಗಿ ದುಡಿಯು ಎಂಬುದಾಗಿ ತಿಳಿದಿರುವ ಜನ ಬರೇ ಬೆರಳೆಣಿಕೆಯಷ್ಟು. ಸ ಸಂಸ್ಥೆಗಳು ಸೇರಿ ಸಂಗಾತಿಗೆ ಸಹಾಯ ಮಾಡಿದರೆ ಮ ಸಾಧ್ಯವಾದೀತು ಇಲ್ಲದಿದ್ದರೆ ತುಂಬಾ ಕಷ್ಟವಾಗುತ್ತದೆ.

ಪೂಜಾರಿ ಮೊಣ್ಣ

